ಹ ಡ ದ ಮ್ಮ

ಕೀ॥ ಶೇ॥ ರುದ್ರಮ್ಮನವರಿಗೆ,

**ಸಮರ್ಪಣ.**

ಗ್ರಂಥಕರ್ತ.

# ಮುನ್ನುಡಿ.

ನಮ್ಮ ಮಿತ್ರರಾದ **ಎಂ. ಕೆ. ನಾಗಪ್ಪನವರು** ತಮ್ಮ "ಲಾವಣ್ಯವತಿ"ಗೆ ಮುನ್ನುಡಿಯನ್ನು ಬರೆಯ ಹೇಳಿದ್ದರಿಂದ ಎರಡುಮಾತು ಬರೆಯುವೆನು ಈ ಪುಸ್ತಕವು ಅವರಿಂದ ಇನ್ನು ಬರೆಯಲಿರುವ ಅನೇಕ ಪುಸ್ತಕಗಳ ಮಾಲೆಯಲ್ಲಿ ಮೊದಲನೆಯದು. ಲೇಖಕರ ಮಾತೃಭಾಷೆಯು ಕನ್ನಡವಾಗಿದ್ದರೂ ಶಾಲೆಯಲ್ಲಿ ಅವರ ಎಲ್ಲ ಅಭ್ಯಾಸವು ತೆಲುಗುಭಾಷೆಯಲ್ಲಿಯೇ ಆಗಿರುವದು. ಆ ಅಭ್ಯಾಸದ ಫಲವಾಗಿ ತೆಲುಗಿನಲ್ಲಿ "ಭಾನುಮತಿ" ಯೆಂಬ ಕಾದಂಬರಿಯನ್ನು ಬರೆದು ಲೇಖಕರು ಆಂಧ್ರದೇಶದ ಆದರಕ್ಕೆ ಪಾತ್ರರಾಗಿರುವರು. ಅಂತೆಯೇ ತಾಯ್ನಾಡಿನ ಆದರಕ್ಕೂ ಪಾತ್ರರಾಗಲು ಮೊದಲಿಟ್ಟ ಇವರ ಲೇಖನ ಕಾರ್ಯವು ಅಭಿನಂದನೀಯವು. ಇವರ ರಾಜಕೀಯೋದ್ಯೋಗವು (ಸಬ್ ರಿಜಸ್ಟ್ರಾರ್ ಕೆಲಸವು) ಸಾಹಿತ್ಯಸೇವೆಗೆ ಅಡ್ಡಿಯಾಗುವಂತಿದ್ದರೂ ಅದರಲ್ಲಿಯೇ ಅವಕಾಶವನ್ನು ಕಲ್ಪಿಸಿಕೊಂಡು ಕನ್ನಡ ಸಾಹಿತ್ಯ ಗ್ರಂಥಗಳನ್ನು ಓದುತ್ತಾ ಅದರೊಡನೆಯೇ ಲೇಖನ ಕಾರ್ಯವನ್ನು ಕೈಕೊಂಡಿರುವ ಈ ತರುಣಲೇಖಕರ ಸಾಹಿತ್ಯ ಸೇವೆಯ ಹುರುಪು ಇನ್ನುಳಿದ ಸಾಹಿತ್ಯ ಪ್ರೇಮಿಗಳನ್ನು ಹುರಿದುಂಬಿಸುವಂತಿರುವದು. ಕನ್ನಡನಾಡಿನ ಸಂಸ್ಕೃತಿಯನ್ನು ಸ್ವತಂತ್ರರೀತಿಯಿಂದ ಕಾಪಾಡಲಾಶೆಯುಳ್ಳವರೆಲ್ಲರೂ ಕನ್ನಡ ಸಾಹಿತ್ಯ ಸಂಪತ್ತಿಯನ್ನು ವೃದ್ಧಿಗೊಳಿಸುವ ಕಾರ್ಯದಲ್ಲಿ ಈ ತರುಣಲೇಖಕರಂತೆ ಮುಂದುವರಿಯಬೇಕೆಂಬುದೇ ನನ್ನ ಆಶೆ.

**ಲಾವಣ್ಯವತಿ**– ಈ ಕಾದಂಬರಿಯ ಕಥಾಬೀಜವು ಐತಿಹಾಸಿಕವಿದ್ದರೂ ಅದನ್ನು ಲೇಖಕರು ಕಾದಂಬರಿಗೆತಕ್ಕಂತೆ ರೂಪುಗೊಳಿಸಿರುವರು ಕತೆಯು ವಿಷಾದಾಂತವಾಗಿದೆ. ಲೇಖಕರು ವಾಚಕರನ್ನು ಕುರಿತು:—

"ಕತೆಯು ವಿಷಾದಾಂತವಾಗಿರುವುದೆಂದು ತಿರಸ್ಕರಿಸಬೇಡಿ"ರೆಂದು ಹೇಳುತ್ತಾ "ಎಷ್ಟುಜನರ ಜೀವಿತನಾಟಕವು ವಿಷಾದಾಂತವಾಗಿಲ್ಲ?" ಎಂದು ಪ್ರಶ್ನೆಹಾಕಿರುವರು. ಕರುಣಾರಸ ತತ್ವಜ್ಞನಾದ ಭವಭೂತಿಯ

ಉತ್ತರ ರಾಮಚರಿತ್ರೆಯ ಸ್ವಾರಸ್ಯವನ್ನು ತಿಳಿದ ವಾಚಕರು ಈ ಕತೆಯನ್ನು ತಿರಸ್ಕರಿಸಲಾರರು. ವಿಷಾದವು ಪಶ್ಚಾತ್ತಾಪಾಗ್ನಿಯಲ್ಲಿ ಜನಜೀವನವನ್ನು ಶುದ್ಧಗೊಳಿಸುವ ಮೂಷೆಯಲ್ಲವೆ !

**ಶೈಲಿ**:— ಲಾಣ್ಯಾವತಿಯ ಲೇಖನದ ಶೈಲಿಯಲ್ಲಿ ಬಳಿಕೆಯಲ್ಲಿರುವ ಶಬ್ದಗಳೇ ಬಹಳವಾಗಿದ್ದರೂ ಅವುಗಳಲ್ಲಿ ಸರಳತೆಯೂ ನೈಜವಾದ ಮಾಧುರ್ಯವೂ ಹೊರಹೊಮ್ಮಿರುವುದಲ್ಲದೆ, ಅರ್ಥಪುಷ್ಟಿಗೆ ಭಂಗವಾಗುವಂತಿಲ್ಲ. ಅಲ್ಲಲ್ಲಿ ಒಂದೆರಡು ಶಬ್ದದೋಷಗಳಿದ್ದರೂ ಅವು ಅಸಹ್ಯದೋಷಗಳಾಗಿ ಪರಿಣಮಿಸಿಲ್ಲ ಮುಂದಿನ ಲೇಖನಗಳಲ್ಲಿ ಈ ನ್ಯೂನತೆಯೂ ಲೇಖಕರಲ್ಲಿ ಕಾಣಲಾರದೆಂದೇ ನನ್ನ ನಂಬಿಕೆ. ಮುದ್ರಣಾದಿದೋಷಗಳಿಗೆ ಮುಂದಿನ ಮುದ್ರಣದಲ್ಲಿ ಅವಕಾಶ ವಿರದಂತೆ ನೋಡಿಕೊಳ್ಳುವುದು ಲೇಖಕರ ಕರ್ತವ್ಯವು ಒಟ್ಟಿನಮೇಲೆ ಈ ಪುಸ್ತಕವು ಲೇಖಕರ ಮುಂದಿನ ಲೇಖನ ಕಲಾಪೂರ್ಣತೆಗೆ ಸಹಕಾರಿಯಾಗಿರುವದು. ಲೇಖಕರ ಈ ಸ್ತುತ್ಯಕಾರ್ಯಕ್ಕೆ ಭಾಷಾಭಿಮಾನಿಗಳಾದ ಸರ್ವ ಕನ್ನಡಿಗರೂ ಪ್ರೋತ್ಸಾಹವೀಯದಿರಲಾರರೆಂದು ಭಾವಿಸುವೆನು.

ವೈ. ನಾಗೇಶ ಶಾಸ್ತ್ರಿ,
ಬಳ್ಳಾರಿ.

# ಶುದ್ಧಿಪತ್ರಿಕೆ.



| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೮ | ೧೩ | ಧಾರೆಯರೆದು | ಧಾರೆಯೆರೆದು |
| ೮ | ೧೭ | ನಕಾಮಣಿ | ಕನ್ಯಕಾಮಣಿ |
| ೯ | ೧೮ | ನೆನಿಸಿ | ನೆನಸಿ |
| ೧೧ | ೧೩ | ಲೆಖ್ಖಕ್ಕೆ | ಲೆಕ್ಕಕ್ಕೆ |
| ೧೨ | ೧೦ | ವರೆ | ಮರೆ |
| ೧೫ | ೫ | ಮೊರೆ | ಮರೆ |
| ೧೫ | ೭ | ಮೊರೆ | ಮರೆ |
| ೧೫ | ೨೧ | ಕಳಾಕೋವಿದ | ಕಲಾಕೋವಿದ |
| ೨೦ | ೩ | ಮೊರೆ | ಮರೆ |
| ೨೧ | ೨೧ | ಇದುವರಿಗೂ | ಇದುವರೆಗೂ |
| ೨೧ | ೨೩ | ನಾಯಕನನ | ನಾಯಕನೂ |
| ೨೩ | ೨ | ಮುಕುಲಿತ | ಮುಕುಳಿತ |
| ೪೪ | ೧೭ | ಸೇಖರಿಸಿ | ಸೇರಿಸಿ |
| ೪೭ | ೯ | ಮೊರೆ | ಮರೆ |
| ೪೮ | ೨೧ | ಬಲತ್ಕಾರ | ಬಲಾತ್ಕಾರ |
| ೫೫ | ೬ | ಮೊರೆ | ಮರೆ |
| ೬೧ | ೧ | ಗಣಿ | ಕಣಿ |
| ೬೧ | ೧೯ | ಯಾತಕ್ಕೆ | ಯೇತಕ್ಕೆ |
| ೬೨ | ೯ | ಯಾತಕ್ಕಾಯಿ | ಯೇತಕ್ಕಾಯಿ |
| ೬೨ | ೧೨ | ಮದುಮೆ | ಮದುವೆ |
| ೬೩ | ೭ | ನನಗೆಬೇಕೆ | ನಗಬೇಕೆ |
| ೬೩ | ೧೧ | ಮೊಂಕು | ಮಂಕು |

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೬೯ | ೫ | ಗಣಿ | ಕಣಿ |
| ೭೮ | ೨೩ | ದುರಂಧರ | ಧುರಂಧರ |
| ೭೨ | ೨೩ | ಬಿದ್ದಂತೆಯಂದು | ಬಿದ್ದಂತೆಯೆಂದು |
| ೭೨ | ೨೦ | ವಿವಾಹಪ | ವಿವಾಹವನ್ನು |
| ೭೯ | ೬ | ನೀನಂದರೆ | ನೀವೆಂದರೆ |
| ೯೦ | ೧೭ | ಜರಿಗಿ | ಜರಗಿ |
| ೯೬ | ೨೦ | ಸಟ | ಸಟೆ |
| ೧೦೩ | ೬ | ಬಲ್ಲವನಾಗಲಿ | ಬಲ್ಲನಾಗಲಿ |
| ೧೦೪ | ೧೯ | ಒಂದನೆ | ವಂದನೆ |
| ೧೦೭ | ೧೯ | ಬೇಕಾಗಿದ್ದಿಲ್ಲ | ಬೇಕಾದ್ದಿಲ್ಲ |
| ೧೦೯ | ೧೬ | ಸಾಗದಲ್ಲಿ | ಸಾಗರದಲ್ಲಿ |
| ೧೧೫ | ೧೭ | ತನ್ನ | ತಮ್ಮ |
| ೧೧೬ | ೯ | ಅತನು | ಆತನು |
| ೧೧೯ | ೨೩ | ನಿರ್ಬಂಧರದಲ್ಲಿ | ನಿರ್ಬಂಧದಲ್ಲಿ |
| ೧೨೩ | ೧೭ | ಲೇಖಿಯನ್ನು | ಪತ್ರವನ್ನು |
| ೧೨೪ | ೧ | ಯಚ್ಚತ್ತಿದ್ದರು | ಎಚ್ಚತ್ತಿದ್ದರು |
| ೧೨೫ | ೫ | ರಾಮನಾಯನು | ರಾಮನಾಯಕನು |
| ೧೨೮ | ೨೩ | ನೋಡುತ್ತಿರುವೆನು | ನೋಡುತ್ತಿರುವನು |
| ೧೩೫ | ೧೨ | ಪ್ರತ್ಯುಪಕಾರವುಂಟೆ? | ಪ್ರತಿಯುಂಟೆ |

# ಲಾವಣ್ಯವತಿ.



## ೧ನೆಯ ಪ್ರಕರಣ.

**ಬಹಳದಿವಸಗಳ** ಹಿಂದೆ ರತ್ನಗಿರಿರಾಜಬೀದಿಯು ನೇತ್ರಾನಂದಕರವಾಗಿತ್ತು. ಅದರ ಶೃಂಗಾರವನ್ನು ವರ್ಣಿಸಲು ಅಸಾಧ್ಯ. ಪಟ್ಟಣವಾಸಿಗಳೆಲ್ಲರೂ ಅತಿ ಸಂಭ್ರಮದಿಂದ ಇದ್ದರು. ಪ್ರತಿಯೊಬ್ಬರೂ ನೂತನ ದಂಪತಿಗಳನ್ನು ಆಹ್ವಾನ ಮಾಡುವ ಕಾರ್ಯದಲ್ಲಿ ಮಗ್ನರಾಗಿದ್ದರು. ಮುತ್ತೈದೆಯರು ಮಂಗಳ ಸ್ನಾನವನ್ನು ಮಾಡಿ, ಸರ್ವಾಲಂಕಾರ ಭೂಷಿತೆಯರಾಗಿ ಮಂಗಳಾರತಿಗಳಿಂದ ತಮ್ಮ ತಮ್ಮ ಗೃಹದ್ವಾರಗಳಲ್ಲಿ ನಿಂತಿದ್ದರು. ಎಲ್ಲಿ ನೋಡಿದರೂ ಮಂಗಳ ವಾದ್ಯಗಳು ಜನರ ಮನವನ್ನು ರಂಜಿಸುತಿದ್ದವು. ಪಟ್ಟಣದ ಹೊರಗಿನ ದೇವಿಯ ಆಲಯದಿಂದ ದಂಪತಿಗಳು ಅತಿ ಸಂಭ್ರಮದಿಂದ ಹೊರಟರು. ಪಟ್ಟದಾನೆಯ ಮೇಲೆ ಕೋಟೆಗೆ ಒಡೆಯನಾದ ರಾಮನಾಯಕನು ಸುವರ್ಣರಚಿತವಾದ ಅಂಬಾರಿಯಲ್ಲಿ ಕುಳಿತಿದ್ದನು. ಮತ್ತೊಂದು ಮದಗಜದಮೇಲೆ ನೂತನ ದಂಪತಿಗಳು ಜನರ ದೃಷ್ಟಿಯನ್ನು ಆಕರ್ಷಿಸುತ್ತಿದ್ದರು.

ಭೀಮನಾಯಕನ ವಯಸ್ಸು ಇಪ್ಪತ್ತುನಾಲ್ಕು, ಇಪ್ಪತ್ತೈದು ವರುಷಗಳಿರಬಹುದು. ಮುಖವು ಪ್ರಭಾಕರನಂತೆ ಹೊಳೆಯುತ್ತಿತ್ತು. ಪೂರ್ವಾಚಾರ ಪರಾಯಣನಾದ ಆ ಯುವಕನು, ಬಾಲ್ಯದಿಂದಲೂ ದೇಹಪರಿಶ್ರಮವನ್ನು ಮಾಡಿ, ತನ್ನ ಕುಲಾಚಾರದಂತೆ ಖಡ್ಗ ಕಠಾರಿಗಳಿಂದ ಯುದ್ಧನೈಪುಣ್ಯವನ್ನು ಸಂಪಾದಿಸಿ, ಆ ವಯಸ್ಸಿನವರೆಗೂ ಬ್ರಹ್ಮಚರ್ಯವನ್ನತಿಕ್ರಮಿಸದೆ ಇದ್ದನಾದುದರಿಂದ ಆತನ ಶರೀರ ದಾರಢ್ಯಕ್ಕಾಗಲಿ ಮುಖದ ಮೇಲಿನ ತೇಜಸ್ಸಿಗಾಗಲಿ ಬೆರಗಾಗಬೇಕಾಗಿದ್ದಿಲ್ಲ ಷೋಡಶಕಳಾಪರಿಪೂರ್ಣೆಯಾದ ಷೋಡಶಾಬ್ದಗಳ ಸುಂದರೀಮಣಿಯು ಆತನ ವಾಮಭಾಗದಲ್ಲಿ ಇರುತ್ತಿದ್ದಾಗ ಜನರ ನೋಟವು ಮತ್ತಾವಕಡೆಗೆ ಚಲಿಸಬಲ್ಲದು ?

ಭೀಮನಾಯಕನು ರತ್ನಗಿರಿಗೆ ಅರಸನಾದ ರಾಮನಾಯಕನ ಮುಖ್ಯಮಂತ್ರಿಯು. ಆತನ ಮುತ್ತಾತನಾದ ಹನುಮನಾಯಕನು ತಮ್ಮ ತಂದೆ ಮೋಹಿಸಿದ ಕನ್ಯಾರತ್ನವನ್ನು ತರುವ ಸಮಯದಲ್ಲಿ ತಾನು ರಾಜ್ಯವನ್ನು ತ್ಯಜಿಸುವೆನೆಂತಲೂ, ತಮ್ಮ ಚಿಕ್ಕಮ್ಮನ ಗರ್ಭ ಜಾತನನ್ನೇ ರತ್ನಗಿರಿಗೆ ರಾಜನನ್ನು ಮಾಡುವೆನೆಂತಲೂ, ಮಾತು ಕೊಟ್ಟಿದ್ದನು. ರಾಜ್ಯವು ಭೀಮನಾಯಕನ ವಂಶದವರದಾಗಿದ್ದರೂ, ರಾಮನಾಯಕನ ವಂಶದವರಿಗೆ ಸೇರಿತ್ತು. ತಮ್ಮನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಹನುಮನಾಯಕನು ಭೃತ್ಯನೋಪಾದಿಯಲ್ಲಿ ರಾಜ ಸೇವಾಧುರಂಧರನಾಗಿ ರಾಜ್ಯಕಾರ್ಯದಲ್ಲಿ ಪಾಲ್ಗೊಂಡು, ಆತನಿಗೆ ಸಹಾಯಭೂತನಾಗಿದ್ದನು. ಆ ಸಂಪ್ರದಾಯವೇ ವಂಶಪಾರಂಪರ್ಯವಾಗಿ ಬರಹತ್ತಿತ್ತು. ರಾಜವಂಶದವರು ಮಂತ್ರಿಯ ಮನೆತನದವರನ್ನು ಉತ್ಕೃಷ್ಟ ಗೌರವದಿಂದ ನೋಡುತ್ತಿದ್ದರು ಆ ಸ್ಥಾನದಲ್ಲಿ ರಾಜನಿಗೆ ಸಮಾನವಾಗಿ ಮಂತ್ರಿಪುಂಗವನಿಗೆ ಆಸನವು ಸಹಾ ಉಂಟು. ಅಷ್ಟು ಸನ್ಮಾನಯುತನಾಗಿ ಇದ್ದುದರಿಂದಲೇ ಚಿತ್ರದುರ್ಗದ ರಾಜಕುಮಾರಿಯು ಮಂತ್ರಿಪರ್ಯನಾಗಿದ್ದ ಭೀಮನಾಯಕನಿಗೆ ಅರಸಿಯಾದಳು.

ರಾಮನಾಯಕನೂ ಭೀಮನಾಯಕನೂ ಸಮವಯಸ್ಕರು ಬಾಲ್ಯದಿಂದಲೂ ಒಂದೇ ಗರಡಿಯಲ್ಲಿ, ಒಬ್ಬರೇ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿದ್ದವರಾದ್ದರಿಂದ ಅವರ ಅನ್ಯೋನ್ಯ ಪ್ರೇಮವು ಅಸಮಾನವಾಗಿತ್ತು. ಆ ಬಾಲಮಿತ್ರನೂ, ಮುಖ್ಯ ಮಂತ್ರಿಯೂ ಆದ ಭೀಮನಾಯಕನ ವಿವಾಹದ ವೇಳೆಯಲ್ಲಿ ರಾಮನಾಯಕನ ಆನಂದವು ಹೇಳಬೇಕಾದದ್ದೇನಿದೆ? ಆ ದಿನದ ಉತ್ಸವವು ನೇತ್ರಾನಂದಕರವಾಗಿ ವರ್ಣಿಸಲೆಣಿಸಿದರೆ ಲೇಖಕರನ್ನು ನೋಲಿಸುತ್ತಿತ್ತು.

ಸವಾರಿಯು ಅರಮನೆಯನ್ನು ಸೇರಿತು. ರಾಮನಾಯಕನು ಮಿತ್ರನನ್ನು ಆಲಿಂಗನಮಾಡಿ ಆನಂದಬಾಷ್ಪಗಳನ್ನು ಸುರಿಸಿದನು. ಆದಿನ ದಂಪತಿಗಳನ್ನು ತನ್ನ ಅರಮನೆಯಲ್ಲಿಯೇ ನಿಲ್ಲಿಸಿಕೊಂಡು, ಷಡ್ರಸೋಪೇತವಾದ ಊಟವನ್ನುಣಿಸಿ, ಉಡುಗರೆಗಳನ್ನುಡಿಸಿ ಸನ್ಮಾನಗೈದು ಕಳುಹಿಸಿಕೊಟ್ಟನು. ಭೀಮನಾಯಕನು ತನ್ನ ಒಡೆಯನ ಆಜ್ಞೆಯನ್ನು ಪಡೆದು ನಿಜಗೃಹಕ್ಕೆ ಸತಿಯೊಡನೆ ಹೊರಟು ಹೋದನು. ಪ್ರಭುವೂ ಮಿತ್ರನೂ ಆದ ರಾಮನಾಯಕನು ತನಗೆ ಮಾಡಿದ ಗೌರವಕ್ಕೆ ಆತನನ್ನು ಬಗೆಬಗೆಯಿಂದ ಕೊಂಡಾಡಿದನು ತನ್ನ ಕೃತಜ್ಞತೆಯನ್ನು ಹೊರಪಡಿಸಲು ಸಮಯಬೇಕೆಂದು ಇದಿರುನೋಡುತ್ತಿದ್ದನು.

ಸಮಯವೊದಗಿತು. ಭೀಮನಾಯಕನ ಪರೀಕ್ಷೆಯ ಸಮಯ ಬಂತು. ದಿನಕರನು ಪೂರ್ವಾದ್ರಿಯಲ್ಲಿ ತಲೆದೋರುತ್ತಿದ್ದನು. ಭೀಮನಾಯನು ಕಾಲಕೃತ್ಯಗಳನ್ನು ಆಗಲೇ ತೀರಿಸಿಕೊಂಡು ರಾಜದರ್ಶನಕ್ಕೆ ಹೊರಡುವ ಸಮಯ. ದ್ವಾರಪಾಲಕನು ಬಂದು ಯಾವನೋ ಚಾರನೋರ್ವನು ತಮ್ಮ ದರ್ಶನಕ್ಕೆ ಬಂದಿರುವನೆಂದು ಬಿನ್ನಹ ಮಾಡಲು, ಅವನನ್ನು ಒಳಕ್ಕೆ ಬರಮಾಡಿಕೊಂಡನು. ಚಾರನು ಮಂತ್ರಿಪುಂಗವನಿಗೆ ವಿನಯಪೂರ್ವಕ ನಮಿಸಿ, ತಮ್ಮ ಪ್ರಭುವು ಕಳುಹಿಸಿದ್ದ ಪತ್ರವನ್ನು ಅವರಿಗೆ ಕೊಟ್ಟನು. ಭೀಮನಾಯಕನು ಅದನ್ನು ನೋಡಿಕೊಂಡನು. ಆದಿನ ರಾಜಸಭೆಗೆ ಹೋಗಲು ಇಷ್ಟವಿಲ್ಲದೆ ಹೋಯಿತು. ಹಿಂದಿನ ದಿನದ ಆಯಾಸದಿಂದ ಅರಸನನ್ನು

ಭೆಟ್ಟಿಯಾಗಲಾರೆನೆಂದು ವರ್ತಮಾನವನ್ನು ಕಳುಹಿಸಿದನು. ಭವನದಲ್ಲಿ ಒಬ್ಬನೇ ಕುಳಿತುಕೊಂಡು ಪತ್ರವನ್ನು ಮತ್ತೊಮ್ಮೆ ಈ ರೀತಿಯಾಗಿ ಪಠಿಸಿದನು.

ಶ್ರೀ ರತ್ನಗಿರಿ ರಾಜವಂಶಲಲಾಮರಾದ, ಶ್ರೀ ಭೀಮನಾಯಕರವರಿಗೆ— ಪೆನುಗೊಂಡೆ ಕೋಟೆಗೆ ಒಡೆಯನಾದ ನರಸನಾಯಕನು ವಿನಯಪೂರ್ವಕ ಮಾಡುವ ವಿಜ್ಞಾಪನೆ.

ರತ್ನಗಿರಿ ರಾಜವಂಶಾವಳಿಯ ವಿಷಯದಲ್ಲಿ ತಮಗೆ ತಿಳಿಯದ ವಿಶೇಷವೇನೂ ಇಲ್ಲ. ನ್ಯಾಯಾವಲಂಬಕರು ಆರಾದರೂ ರಾಜ್ಯವು ತಮ್ಮದೆಂದು ಘಂಟಾಘೋಷವಾಗಿ ನುಡಿಯುವರು. ಈಗ ರಾಮನಾಯಕನು ನಿಮಗೆ ಮಂತ್ರಿಯಾಗಿರಬೇಕಲ್ಲದೆ, ರಾಮನಾಯಕನಿಗೆ ನೀವು ಪ್ರಧಾನರಾಗಿರುವದು ಸಮಂಜಸವಲ್ಲ. ಹಿಂದೆ ಜರುಗಿದ ವಿಷಯ ಜರುಗಿಹೋಯಿತು. ಈಗಲಾದರೂ ನೀವು ಸಿಂಹಾಸನವನ್ನೇರಲು ಅಪೇಕ್ಷೆ ಮಾಡಿದರೆ, ತಮಗೆ ಸಹಾಯ ಮಾಡಲು ಸೇವಾನುಸೇವಕನಾಗಿರುವೆನು. ಸಿಡಗಲ್ಲು ನಂಗನಾಯಕನನ್ನು ಸೋಲಿಸಿ, ಆತನ ಕೋಟೆಯನ್ನು ಹುಲಿನರಿಗಳ ಪಾಲುಮಾಡಿ, ಜಯಭೇರಿಯನ್ನು ಹೊಡಸಿದ್ದು ಲೋಕವಿದಿತವಷ್ಟೇ. ಆ ಬಲಪರಾಕ್ರಮಗಳಿಂದ ತಮ್ಮ ರಾಜ್ಯವನ್ನು ತಮಗೆ ಕೊಡಿಸಲು ಸಿದ್ಧನಾಗಿರುವೆನು

ತಮ್ಮ ಆಜ್ಞೆಯನ್ನು ನಿರೀಕ್ಷಿಸುವ,<br>
ಸೇವಕ,<br>
**ನರಸನಾಯಕ.**

ಭೀಮನಾಯಕನು ಪತ್ರವನ್ನು ಓದಿ ಮುಗಿಸಿದನು. ಆಶಾಪಿಶಾಚವು ಆತನ ಮನಸ್ಸಿನಲ್ಲಿ ತನ್ನ ರಾಕ್ಷಸೀಕೃತ್ಯವನ್ನು ಪ್ರಾರಂಭಿಸಿತು. ತಾನು ರಾಜನಾಗಬೇಕು. ತನ್ನ ಅರಸಿಯು ರಾಣಿಯಾಗಬೇಕು. ರಾಮನಾಯಕನನ್ನು ಸಿಂಹಾಸನದಿಂದ ಕೆಳಗೆ ದಬ್ಬಬೇಕು. ಅಡ್ಡಬಂದರೆ ಈ ಲೋಕದಿಂದಲೇ ತೊಲಗಿಸಬೇಕು. ಇತ್ಯಾದಿಯೋಚನೆಗಳು ಒಂದರಿಂದೊಂದು ಆತನ ಮನಸ್ಸಿನೊಳಗೆ ಉದ್ಭವಿಸಿದವು.

ಆಹಾ! ಅರುಪಿಶಾಚವೇ! ನಿನ್ನ ಮಹಿಮೆಯನ್ನು ಎಷ್ಟೆಂದು ಒರ್ಣಿಸಲಿ? ಒಂದುಕಡೆ ಸಹೋದರ, ಮತ್ತೊಂದುಕಡೆ ಹಿತಾಭಿಲಾಷಿಯಾದ ಸ್ನೇಹಿತ. ಇದಲ್ಲದೆ ತನ್ನನ್ನು ಪಾಲಿಸುವ ಪ್ರಭುವು. ಆತನನ್ನು, ನಿನ್ನನ ದಿವಸ ಸಾಯಂಕಾಲ ಅತ್ಯಾದರ ಭಾವದಿಂದ ಸನ್ಮಾನಿಸಿ ಕಳುಹಿಸಿದ ರಾಮನಾಯಕನನ್ನು ಕೊಲ್ಲಲು ಭೀಮನಾಯಕನನ್ನು ಎಷ್ಟು ಸುಲಭವಾಗಿ ಒಪ್ಪಿಸಿದೆ? ಆಹಾ! ನಿನ್ನ ಪ್ರಭಾವವು ಸಾಮಾನ್ಯವೇ?

ಭೀಮನಾಯಕನು ಆರೀತಿ ಯೋಚಿಸುತ್ತಿರುವಾಗ್ಯೆ ಒಂದು ಅಂತರಾಯವಾಯ್ತು. ರಂಗನಾಯಕಿಯು ಮೆಲ್ಲನೆ ಬಂದು ನಾಥನ ಕಣ್ಣಾವರೆಗಳನ್ನು, ಅತಿಕೋಮಲವಾದ ತನ್ನ ಕರಕಮಲಗಳಿಂದ ಮುಚ್ಚಿದಳು. ಚಿಂತಾಕ್ರಾಂತನಾದ ಭೀಮನಾಯಕನು ಭ್ರಾಂತಿಯಿಂದೆದ್ದು ಮನೋವಲ್ಲಭೆಯಾದ ರಂಗನಾಯಕಿಯನ್ನು ನೋಡಿದನು. ದುರಾಲೋಚನೆಗೆ ಆ ಯುವಕನು ಜನ್ಮಮಧ್ಯದಲ್ಲಿ ಈ ದಿವಸವೇ ಅವಕಾಶವಿತ್ತದ್ದು. ಮನಸಿನ ವಿಕಲ್ಪವು ಆತನ ಮುಖದಲ್ಲಿ ಮುದ್ರಿತವಾಗಿತ್ತು. ಅದನ್ನು ರಂಗನಾಯಕಿಗೆ ಕಾಣಗೊಡಿಸಬಾರದೆಂದು ಪ್ರಯತ್ನಮಾಡಿದರೂ ಸಾಧ್ಯವಿಲ್ಲದೆ ಹೋಯಿತು. ಅತಿ ಚತುರೆಯಾದ ಆ ರಾಜಕುವರಿಯು ಮನೋವಲ್ಲಭನ ಮುಖವೈಖರಿಯಿಂದ ಆತನು ಚಿಂತಾಸಾಗರ ಮಗ್ನನಾಗಿರುವನೆಂದು ಅರಿತಳು. ಕಾರಣವನ್ನು ಹೇಳೆಂದು ನಾಥನನ್ನು ಬೇಡಿಕೊಳ್ಳಲು, ಅಂಜಿಕೆಯೋ, ನಾಚಿಕೆಯೋ, ಸ್ವಲ್ಪಹೊತ್ತು ಸುಮ್ಮನಿದ್ದನು. ಕೊನೆಗೆ ಈ ರೀತಿ ಪ್ರಾರಂಭ ಮಾಡಿದನು.

**ಭೀಮನಾಯಕ**:—ಪ್ರಿಯೇ! ರಾಜಕುಮಾರಿಯಾದ ನಿನಗೆ ರಾಜಕುವರನ ಅರ್ಧಾಂಗಿಯಾಗಬೇಕೆಂಬುವ ಅಭಿಲಾಷೆ ಇಲ್ಲವೇ?

**ರಂಗನಾಯಕಿ**:— ನಾಯಕಾ! ತಾವು ರಾಜಕುವರರಲ್ಲವೆಂದವರು ದಾರು?

**ಭೀಮನಾಯಕ**:— ರಾಜಕುವರನು ನಾನು ಹೇಗಾಗುವೆನು? ನಿಜವಾದ ರಾಜನು ರಾಮನಾಯಕನು. ನಾನು ಆತನ ಸೇವಕನು,

**ರಂಗನಾಯಕಿ**:— ಆ ಸೇವಕತ್ವವೇ ನಿಮ್ಮ ರಾಜರೀತಿಯನ್ನು ಉನ್ನತಗೊಳಿಸಿರುವುದು. ಆಡಿದ ಮಾತಿಗೆ ಕಟ್ಟುಬಿದ್ದು. ವಂಶಪಾರಂಪರ್ಯ ಎಲ್ಲರೂ ರಾಜರಾಗಿಯೂ ರಾಜಸೇವೆಗೆ ಒಳಪಟ್ಟಿದ್ದರಿಂದ ನಿಮ್ಮ ಗೌರವವು ಉತ್ಕೃಷ್ಟವೆನಿಸಿಕೊಂಡಿರುವುದು.

**ಭೀಮನಾಯಕ**.— ಅದು ಹಾಗಿರಲಿ ನಾನೇ ಕೋಟೆಗೆ ಅರಸನಾದರೆ?

**ರಂಗನಾಯಕಿ**.— ಯಾವಕೋಟೆಗೆ?

**ಭೀಮನಾಯಕ**:— ರತ್ನಗಿರಿ ಕೋಟೆಗೆ.

**ರಂಗನಾಯಕಿ**:— ಎಂತು?

**ಭೀಮನಾಯಕ**:— ರಾಮನಾಯಕನನ್ನು ಸಂಹರಿಸಿ. ಇಕೋ, ಈ ಪತ್ರವನ್ನು ನೋಡು. ನರಸನಾಯಕನ ಬಲಪರಾಕ್ರಮವು ಸಾಮಾನ್ಯವಲ್ಲ. ಆತನ ಸಹಾಯದಿಂದ ಈ ಕೋಟೆಗೆ ಒಡೆಯನಾಗುವೆನು.

"ಕಲಿಸದೆ ಬರ್ಪುದು ಕುಶಲಂ, ಇಳೆಯೊಳ್ ಪೆಣ್ಜಾತಿಗೆ" ಎಂದು ನುಡಿದ ಕವಿಶ್ರೇಷ್ಠರ ವಚನವು ಸುಳ್ಳಲ್ಲ. ರಂಗನಾಯಕಿಯು ಪತ್ರವನ್ನು ನೋಡಿದಳು. ನರಸನಾಯಕನ ಭಾವವನ್ನು ಮನೋನೇತ್ರದಿಂದ ಆಮೂಲಾಗ್ರ ವಿಲೋಕಿಸಿದಳು. ನರಸನಾಯಕನು ಸ್ವಾರ್ಥಪರನಾಗಿ, ಭೀಮನಾಯಕನನ್ನು ಆಶಾಪರವಶನನ್ನು ಮಾಡಿ, ರಾಮನಾಯಕನನ್ನು ಕೊಲ್ಲಿಸಿ, ಕೊನೆಗೆ ಭೀಮನಾಯಕಗೆ ತ್ರಿಶಂಕುಸ್ವರ್ಗವನ್ನು ತೋರಿಸುವನೆಂಬುವದು ಅರಘಳಿಗೆಯೊಳಗೆ ಆ ಯುವತೀಮಣಿಗೆ ಗೋಚರವಾಯಿತು. ಅದಂತಿರಲಿ, ರಾಜದ್ರೋಹವು ಪರಮಪಾತಕವು. ಆದ್ದರಿಂದ ತನ್ನ ಪತಿಯನ್ನು ಆ ಪಾಪದ

ಮಾರ್ಗದಿಂದ ಆಚೆಗೆ ತಳ್ಳಲು ಬದ್ಧಕಂಕಣಳಾದಳು. "ಸ್ವಾಮಿ! ಪ್ರತ್ಯುತ್ತರವನ್ನು ಬರೆಯಲು ಅಪ್ಪಣೆ ದಯಪಾಲಿಸಬೇಕು" ಎಂದು ನುಡಿದಳು. ಅದನ್ನು ಕೇಳಿ ಭೀಮನಾಯಕನು ತನ್ನ ಸತೀಮಣಿಯು ಆ ಕಾರ್ಯಕ್ಕೆ ಅನುಮತಿಯನ್ನು ಕೊಟ್ಟಳೆಂದೆಣಿಸಿ ಹಿಗ್ಗಿದನು. ರಂಗನಾಯಕಿಯು ಪ್ರತ್ಯುತ್ತರವನ್ನು ಈರೀತಿ ಬರೆದಳು.

"ಶ್ರೀ ಪೆನುಗೊಂಡೆ ಒಡೆಯನಾದ ಸರಸನಾಯಕನಿಗೆ—ರತ್ನಗಿರಿ ಮಂತ್ರಿಯಾದ ಭೀಮನಾಯಕನು ವಿನಯಪೂರ್ವಕ ಬರೆಯುವ ಪ್ರತ್ಯುತ್ತರ.

ತಾವು ಪ್ರೇರಣೆ ಮಾಡಿದ ಕಾರ್ಯವು ಪಾಪಕರವಾದುದರಿಂದ ಅದಕ್ಕೆ ನನ್ನ ಮನಸ್ಸು ಒಪ್ಪುವದಿಲ್ಲ. ಇಂಥಾ ನಲ್ಲದ ಕಾರ್ಯಕ್ಕೆ ತಾವು ಮತ್ತೊಮ್ಮೆ ನನ್ನನ್ನು ಪ್ರೋತ್ಸಾಹಪಡಿಸಬಾರದು, ಅದರಿಂದ ಫಲವಿರಲಾರದು."

ಅದಕ್ಕೆ ಸಹಿ ಇಡಬೇಕೆಂದು ಕಾಂತನಿಗೆ ಹೇಳಿದಳು ಆತನು ಅದನ್ನು ನೋಡಿ ಖಿನ್ನನಾದನು.

**ಭೀಮನಾಯಕ** — ಇದೇನು! ಈರೀತಿ ಬರೆದಿರುವೆ?

**ರಂಗನಾಯಕಿ**.— ಮತ್ತಾವರೀತಿ ಬರೆಯಬೇಕು?

**ಭೀಮನಾಯಕ** — ನಾನು ಅರಸನಾಗುವುದು ನಿನಗೆ ಬೇಕಿಲ್ಲವೇ?

**ರಂಗನಾಯಕಿ**.— ಅರಸರಾಗಿ ಏನು ಮಾಡುವಿರಿ?

**ಭೀಮನಾಯಕ**:— ಅರಸನಾಗಿ ರಾಜ್ಯವಾಳುವೆನು.

**ರಂಗನಾಯಕಿ**:— ರಾಜ್ಯವಾಳಿ ಏನು ಮಾಡುವಿರಿ?

**ಭೀಮನಾಯಕ** — ಏನು ಮಾಡುವಿಯೆಂದರೆ ಮಾಡುವದಿನ್ನೇನು?

**ರಂಗನಾಯಕಿ** — ಅಯ್ಯೋ! ಪ್ರಿಯಾ!! ನಿಮಗೆ ಭಗವಂತನೇತಕ್ಕೆ ಈ ದುರಾಶೆಯನ್ನು ಕೊಟ್ಟನೋ ತಿಳಿಯೆ. ರಾಜ್ಯವಾಳಿ ನೀವು ಮಾಡುವುದೇನು. ಸ್ವಧರ್ಮವನ್ನು ಬಿಟ್ಟು ಅನ್ಯಧರ್ಮಕ್ಕೆ ಆಶಿಸುವಿರಿ. ದೂರದ ಬೆಟ್ಟ ಕಣ್ಣಿಗೆ ನುಣಪು. ರಾಜ್ಯಪದವಿಯಲ್ಲಿ ತಾನೇ ಏನು ಸುಖವುಂಟು? ನಿಷ್ಕಾರಣವಾಗಿ ನೀವು ರಾಮನಾಯಕನ ಪ್ರಾಣಕ್ಕೆ ಗುರಿಯಿಟ್ಟಂತೆ, ಅರಸರೇ ಆದರೆ ನಿಮ್ಮ ಪ್ರಾಣಕ್ಕೆ ಗುರಿ ಇಡುವವರು ಎಷ್ಟೋ ಜನರು ಹುಟ್ಟುವರು. ಇದಲ್ಲದೆ, ನರಸನಾಯಕನ ಆಶೆಯು ರಾಮನಾಯಕನನ್ನು ಪದಭ್ರಷ್ಟನನ್ನಾಗಿ ಮಾಡಬೇಕೆನ್ನುವುದೇ ಹೊರತು, ನಿಮ್ಮನ್ನು ಸಿಂಹಾಸನಾರೂಢರನ್ನು ಮಾಡಬೇಕೆಂಬುವದಲ್ಲ. ಬಲಯುತನಾದ ನಿಡಗಲ್ಲು ರಂಗನಾಯಕನನ್ನು ಸೋಲಿಸಿ ಆತನು ಈಗಲೇ ಎಷ್ಟೋ ಬಲಿಷ್ಠನಾಗಿರುವನು ನಮ್ಮ ತಂದೆಯು ಅವನಿಗೆ ಅಂಜಿ ರತ್ನಗಿರಿಯವರ ಸಹಾಯವನ್ನು ಅಪೇಕ್ಷಿಸಿ ನಿಮಗೆ ಎನ್ನನ್ನು ಧಾರೆಯೆರೆದು ಕೊಟ್ಟರು ನೀವು ರಾಮನಾಯಕನನ್ನು ಪದಭ್ರಷ್ಟನನ್ನು ಮಾಡಲು ಅವಕಾಶಪತ್ರದ್ದೇ ಆದರೆ, ನರಸನಾಯಕನ ಪ್ರತಾಪಕ್ಕೆ ಎದುರಿಲ್ಲದೆ ಎಲ್ಲಾ ಕೋಟೆಗನ್ನು ನಿರಾಯಾಸವಾಗಿ ವಶಮಾಡಿಕೊಳ್ಳುವನು. ಆ ದುಷ್ಟಾತ್ಮನು, ಅಸಂಖ್ಯಾತರಾದ ಕನ್ಯಕಾಮಣಿಯರನ್ನು ಬಲವಂತದಿಂದ ಪರಿಭವಿಸುತ್ತಿರುವ ಅತ್ಯಾಚಾರವನ್ನು, ಕಿವಿಯಾರ ಕೇಳಿಕೇಳಿ, ನೀವು ಅವನಿಗೆ ಸಹಾಯಮಾಡಿ, ರಾಮದೇವರನ್ನು ಹೋಲುವ ರಾಮನಾಯಕನ ಮೇಲೆ ಕೈಮಾಡುವುದು ಉಚಿತವಲ್ಲ. ಪರಂತು, ರಾಮನಾಯಕನು ನಿಮಗೆ ಮಾಡಿದ ದ್ರೋಹವಾದರೂ ಏನು? ತಮ್ಮನ್ನು ಆತ್ಮಸಹೋದರನಂತೆ ಭಾವಿಸುವನು. ನಿನ್ನನ ದಿನವೇ ಅಲ್ಲವೇ! ನಮ್ಮನ್ನು ಅಷ್ಟೊಂದು ಸನ್ಮಾನಿಸಿ ಕಳುಹಿಸಿದ್ದು? ಅಂಥಾ ಪ್ರಭುವಿನ ಮೇಲೆ ಕೈಮಾಡುವ ಬುದ್ಧಿಯನ್ನು ಈ ಹೊತ್ತಿಗೆ ಮರೆತುಬಿಡಿರಿ. ತಾತ ಮುತ್ತಾತರಂತೆ ಅರಸರ ರಕ್ಷಣೆಗೆ ನಿಮ್ಮ ಜೀವಿತವನ್ನು ಧಾರೆ ಎರೆಯಿರಿ. ಇಂತಹ ಅಲ್ಪಾಲೋಚನೆಗೆ, ಅವಕಾಶವನ್ನು ಕೊಡಬೇಡಿರಿ.

ಭೀಮನಾಯಕನು ನಾಚಿಕೆಯಿಂದ ತಲೆಯನ್ನು ತಗ್ಗಿಸಬೇಕಾಯಿತು. ತನ್ನ ಸತೀಮಣಿಯ ವಾಗ್ಧೋರಣೆಯು ಪ್ರಣಯರಸವನ್ನು ಬಿಟ್ಟು, ವೀರರಸ, ರೌದ್ರರಸಗಳಿಂದ ಮಿಳಿತವಾಗಿದ್ದಿತು. ತಲೆಯೆತ್ತಿ ಆ ವೀರ ವನಿತೆಯನ್ನು ನೋಡಲು ಭೀಮನಾಯಕನಿಗೆ ಧೈರ್ಯವಿಲ್ಲದೆ ಹೋಯಿತು. ರಂಗನಾಯಕಿಯು "ನಾಥಾ! ಏನು? ತಲೆಬಾಗಿಸಿ ಕೂತಿರಿ. ಈ ಪತ್ರಕ್ಕೆ ತಮ್ಮ ರುಜುವನ್ನು ಹಾಕಿರಿ. ಪಾಪದ ಆಲೋಚನೆಗೆ ಅವಕಾಶ ಕೊಟ್ಟದ್ದಕ್ಕೆ ಕ್ಷಮೆಯೆಂದು ಮಹಾಂಕಾಳಿಯನ್ನು ಪ್ರಾರ್ಥನೆ ಮಾಡಿರಿ. ನನಗೆ ನೀವು ಅಂಜಬೇಕಾದದ್ದಿಲ್ಲ. ಈ ವಿಷಯವು ಪರರೊಡನೆ ಬಾಯಿಬಿಡುವದಲ್ಲ. ಮತ್ತೊಂದು ವಿಜ್ಞಾಪನೆ. ನನ್ನ ಮೇಲೆ ಸಿಟ್ಟಾಗಬಾರದು. ಸಹಧರ್ಮಚಾರಿಣಿ ಎಂಬ ಬಿರುದಿನಿಂದಿದ್ದು, ದಾರಿತಪ್ಪಿದ ಮಾನಸಾರಥಿಯಲ್ಲಿ ನೀವು ಬೀಳುವಾಗ್ಗೆ, ಕೈ ಹಿಡಿದು ಕಾಪಾಡುವದು ಧರ್ಮಪತ್ನಿಯ ಕರ್ತವ್ಯವು. ನನ್ನ ಈ ಉಪದೇಶವು ಧರ್ಮಸಮ್ಮತವೆಂಬುವದು ತಮ್ಮ ಮನೋದೈವಕ್ಕೆ ಈಗ ತಿಳಿದಿದೆ. ನನ್ನನ್ನು ಮನ್ನಿಸಿ ಈ ಪತ್ರವನ್ನು ಅವಲೋಕಿಸಿರಿ" ಎಂದು ಅದನ್ನು ಆತನ ಕೈಗೆ ಕೊಟ್ಟಳು. ಭೀಮನಾಯಕನು ಅದಕ್ಕೆ ಸಹಿಯನ್ನು ಹಾಕಿ ಚಾರರೊಡನೆ ನರಸನಾಯಕನಿಗೆ ಕಳುಹಿಸಿಕೊಟ್ಟನು. ಪ್ರಾಣಕಾಂತೆಯನ್ನು ಅನೇಕ ವಿಧದಿಂದ ಕೊಂಡಾಡಿದನು. ಹಿಂದಿನ ದಿನ ರಾಮನಾಯಕನು ತನಗೆ ಮಾಡಿದ ಗೌರವವನ್ನು ನೆನಿಸಿಕೊಂಡನು. ತಾನು ಆತನ ಮೇಲೆ ಮಾಡಿದ ದ್ರೋಹಚಿಂತನೆಗೆ ಕಣ್ಣೀರಿಟ್ಟನು.



# ೨ನೆಯ ಪ್ರಕರಣ.

**ನಿಡಗಲ್ಲಿನ** ಸಮೀಪದಲ್ಲಿ ಪೇಲ್ಬಂಡೆಯೆಂಬ ಸಣ್ಣ ಕೋಟೆಯೊಂದು ಈ ಕಥಾಕಾಲದಲ್ಲಿತ್ತು. ರತ್ನಗಿರಿ, ಪೆನುಗೊಂಡೆ, ಮೊದಲಾದ ಕೋಟೆಗಳಿಗೆ ಅದು ಯಾವವಿಧದಲ್ಲಿಯೂ ಸರಿತೂಗಲಾರದು. ಅದಕ್ಕೆ ಒಡೆಯನಾದ ಬಸಪ್ಪನಾಯಕನ ಸೌಭಾಗ್ಯವು ಸಹಾ ಕೊಂಚವೇ. ನಿಡಗಲ್ಲು ಸಂಗನಾಯಕನಿಗೆ ಆತನು ಅಗ್ರಜನಾಗಬೇಕು. ಅನುಜನಿಗೆ ಆ ಕೋಟೆಯನ್ನು ಬಿಟ್ಟುಕೊಟ್ಟು, ತಾನು ಪೇಲ್ಬಂಡೆಯಲ್ಲಿರುತ್ತಿರಲು, ಪೆನುಗೊಂಡೆಯ ನರಸನಾಯಕನು ತನ್ನ ಮಾಯೋಪಾಯಗಳಿಂದ ಆತನನ್ನು ಕೊಂದು, ಕೋಟೆಯನ್ನು ಹಾಳು ಮಾಡಿ ಹೊರಟುಹೋಗಿದ್ದನು. ಈ ವೃತ್ತಾಂತವು ಬಸಪ್ಪನಾಯಕನಿಗೆ ತಿಳಿದಿತ್ತು. ಕಾರ್ಯವು ಅಷ್ಟಕ್ಕೆ ಕೈಮೀರಿ ಹೋಗಿತ್ತು. ಬಲಭುಜನಾದ ತಮ್ಮನೇ ಹೋಗಿದ್ದನಾದಕಾರಣ ಬಸಪ್ಪನಾಯಕನು, ಶತ್ರುವಾದ ಈ ನರಸನಾಯಕನನ್ನು ಎದುರಿಸಲು ಶಕ್ತಿಹೀನನಾಗಿ, ತನ್ನ ಕೋಟೆಯಲ್ಲಿ ಮರುಗುತ್ತಿದ್ದನು. ತಮ್ಮನ ಮರಣಕ್ಕಿಂತಲೂ ಅತಿಶಯವಾದ ಸಂಕಟವು ಆತನ ಮನಸ್ಸನ್ನು ಆವರಿಸಿಕೊಂಡಿತ್ತು. ಅದನ್ನು ದಾರೊಡನೆಯೂ ಹೇಳಲೊಲ್ಲನು.

ಒಂದು ದಿನ ಆತನು ಅಂತಃಪುರದಲ್ಲಿ ಕುಳಿತಿದ್ದನು. ಒಮ್ಮಿಂದೊಮ್ಮೆಯೇ ಆತನ ಮುಖದಲ್ಲಿ ರೌದ್ರಚಿಹ್ನೆಗಳು ಕಾಣಬಂದವು. ಉನ್ಮಾದವು ತಲೆಗೇರಿದವನಂತೆ ಈ ರೀತಿ ಒದರಿದನು. "ಹಾ ಪಾಪೀ! ಲಾವಣ್ಯವತೀ! ಪಾತಕಿಯಾದ ನೀನು ನನ್ನ ತಮ್ಮನ ಗರ್ಭದಲ್ಲಿ ಜನಿಸಿ, ವಂಶಕ್ಕೆ ಕಳಂಕವನ್ನು ತಂದೆಯಾ! ನೀಚಕುಲೋದ್ಭವನಾದ ನರಸನಾಯಕನನ್ನು ಕೈಹಿಡಿಯಲು ನಿನ್ನ ಮನಸು ಹೇಗೆ ಒಪ್ಪಿತು. ಮಾಯೋಪಾಯಗಳಿಂದ ಅವನು ಸಂಪಾದಿಸಿರುವ ರಾಜ್ಯದ ವೈಭವಕ್ಕೆ ಮರುಳಾಗಿ, ವೀರಪಾಳೆಯಗಾರನಾದ ಸಂಗನಾಯಕನ ಗರ್ಭದಲ್ಲಿ ಜನಿಸಿದ ನೀನು ಅವನ ಪಾಲಾದೆಯಾ?

ಜನಕನ ಮರಣಾನಂತರ, ಕುಮತಿಯಾದ ನರಸನಾಯಕನನ್ನು ಹೀಯಾಳಿಸಿ, ಆಜನ್ಮ ಬ್ರಹ್ಮಚಾರಿಣಿಯಾಗಿರುವೆನೆಂದು ನೀನು ಮಾಡಿದ ಪ್ರತಿಜ್ಞೆಯನ್ನು ಕೇಳಿ ಹಿಗ್ಗಿದೆನೇ. ಅಷ್ಟರಲ್ಲಿಯೇ ನಿನ್ನ ಮನಸ್ಸು ಇಷ್ಟು ಚಲಿಸಿತೇ ?

ಲಾವಣ್ಯವತಿಯ ಅನುಮತಿಯನ್ನು ಪಡೆದು, ನರಸನಾಯಕನು ಆಕೆಯನ್ನು ಮದುವೆಯಾಗಲು ಸಂಭ್ರಮದಿಂದ ಜ್ಯೇಷ್ಠ ಬಹುಳ ಬಿದಿಗೆಯ ದಿವಸ ಬರುವನೆಂಬುವದು ಕೇಳಿ ನನ್ನ ಶರೀರವೆಲ್ಲವೂ ಉರಿದು ಹೋಗುತ್ತಲಿದೆ. ದಾರಿಯೊಳು ಅಡ್ಡಗಟ್ಟಿ ಯುದ್ಧಮಾಡಬೇಕಂದರೆ, ಅವನ ಬಲದಮುಂದೆ ನನ್ನ ಅಲ್ಪಸೈನ್ಯವು ಅರಘಳಿಗೆಯಾದರೂ ನಿಲ್ಲಲಾರದು. ಮೋಸದಿಂದ ಅವನ ಪ್ರಾಣವನ್ನು ತೆಗಿಸೋಣವೆಂದರೆ, ಅದು ನನ್ನಂಥಾ ಕ್ಷತ್ರಿಯನು ಮಾಡಬೇಕಾದ ಕಾರ್ಯವಲ್ಲ. ಬುದ್ಧಿಪತ್ರವನ್ನು ಕಳುಹಿಸೋಣವೆಂದರೆ, ಕಾಮಪರವಶನಾದ ಅವನು ಅದನ್ನು ಲೆಖ್ಖಕ್ಕೆ ತರುವಂತಿಲ್ಲ.

ಅಯ್ಯೋ ! ಲಾವಣ್ಯವತೀ ! ಎಂಥಾ ದಾವಾನಲವನ್ನು ಹಚ್ಚಿಟ್ಟುಕೊಂಡೆ ! ವಂಶಗೌರವ ಕುಠಾರವಾದ ನಿನ್ನ ಲಾವಣ್ಯವನ್ನು ಸುಡಬೇಕೆ ! ಆತ್ಮಹತ್ಯ ಮಾಡಿಕೊಂಡು, ತಂದೆಯೊಡನೆ ಪರಲೋಕಯಾತ್ರೆ ಮಾಡಬಾರದಿತ್ತೆ. ಅದರಿಂದ ಪ್ರಪಂಚಕ್ಕೆ ಆಗುತ್ತಿದ್ದ ಕೊರತೆಯೇನು ? ಸಾಮದಿಂದ ನಿನ್ನ ಮನಸ್ಸು ತಿರುಗಿಸಬೇಕೆಂದರೆ, ಕಾಮದೇವನ ಪ್ರಭಾವಕ್ಕೆ ನೀನು ತುಂಬಾ ವಶಳಾಗಿರುವೆ. ನಿನ್ನ ಶಿರವನ್ನು ತರಿದು ವಂಶವನ್ನು ದೋಷರಹಿತವನ್ನು ಮಾಡಲೇ, ಸ್ತ್ರೀಹತ್ಯಾದೋಷಕ್ಕೆ ಹೊಣೆಯಾಗುವೆನು. ಏನುಮಾಡಲಿ ? ಪಾಪೀ, ನಿನ್ನನ್ನೇನು ಮಾಡಲಿ ?" ಎಂದು ಆ ಶೂರನು ವೀರಾವೇಶದಿಂದ ಪಲ್ಗಡಿಯುತ್ತಿದ್ದನು.

ಈ ಕಥೆಗೆ ಕೇಂದ್ರವಾದ ನಿಡಗಲ್ಲು ಕೋಟೆಯನ್ನು ನೋಡಲು ಪಾಠಕರು ಕುತೂಹಲಪಡುತ್ತಿರಬಹುದು. ಸಿಥಿಲವಾದಕೋಟೆ, ಜೀರ್ಣವಾದ ದೇವಾಲಯ, ಚೂರ್ಣವಾದ ಅರಮನೆ, ನಿರ್ಮಾನು

ಪ್ಯವಾದ ರಾಜಬೀದಿಗಳಿಗೆ ಅವರನ್ನು ಎಳೆಯಲು ಹಿಂಜರಿಯಬೇಕಾಗಿದೆ. ಹಾಳಾದ ಆ ನಗರವು ಈ ದಿವಸಕ್ಕೂ ಮೈಸೂರುರಾಜ್ಯದ ಪಾವಗಡಾ ತಾಲೂಕಾ ದಲ್ಲಿ ಮೂಕಭಾವದಿಂದ ಆಕಾಲದ ಪಾಳೆಯಗಾರರ ಸಾಹಸವನ್ನೂ, ಕಳಾಪ್ರಾವೀಣ್ಯವನ್ನೂ ಸಾರುತ್ತಲಿದೆ. ಅತ್ಯುನ್ನತವಾದ ಭೂಧರ ಸಿಖರದಲ್ಲಿ, ದುರ್ಗಮ ಕಾನನಾವೃತವಾಗಿದ್ದುದರಿಂದ, ಆ ರಾಜಬೀದಿಗಳನ್ನು ಮನುಷ್ಯರು ಬಿಟ್ಟೂಬಿಡದ ಮುಂಚೆಯೇ ಹುಲಿ ನರಿಗಳು ಆಕ್ರಮಿಸಿಕೊಂಡಿದ್ದವು. ಒಬ್ಬ ಸನ್ಯಾಸಿನಿಯೂ, ಮತ್ತೊಬ್ಬ ವೃದ್ಧನಾರಿಯೂ, ತಪ್ಪಿದರೆ ಆ ಪ್ರಾಂತದಲ್ಲಿ ನರಸಂಚಾರವೇ ಇರಲಿಲ್ಲ. ಆ ಸನ್ಯಾಸಿನಿಯು ಹದಿನೈದು, ಹದಿನಾರು ವರ್ಷದ ತರುಣವಯಸ್ಕಳು. ಕಾಷಾಯ ವಸ್ತ್ರಗಳ ಮರೆಯಲ್ಲಿ ಆ ಸುಕುಮಾರಿಯ ಶರೀರಕಾಂತಿಯೂ ಪ್ರಜ್ವಲಿಸುತ್ತಿತ್ತು. ನಿಮೀಲಿತ ನೇತ್ರಳಾಗಿ, ತದೇಕಧ್ಯಾನದಿಂದ ಅಂಬಿಕಾಸ್ಮರಣೆಯಲ್ಲಿದ್ದ ಆಕೆಯ ಮುಖಕಮಲದಲ್ಲಿ ಗಾಂಭೀರ್ಯವು ತಾಂಡವವಾಡುತ್ತಿತ್ತು. ಬಾಹ್ಯಪ್ರಪಂಚವನ್ನೇ ಮರೆತು, ಆಕೆಯು ಶಂಕರಿಯನ್ನು ಕುರಿತು ತಪಸ್ಸು ಮಾಡುತ್ತಿದ್ದಳು.

ಕೆಲವು ಹೊತ್ತಿನಮೇಲೆ ಆಕೆಯು ಕಣ್ದೆರೆದಳು. ಆ ಸಮಯಕ್ಕೆ ನೂತನ ವ್ಯಕ್ತಿಯೊಂದು ಪ್ರತ್ಯಕ್ಷವಾಗಿರಲು ನೋಡಿ ಬೆರಗಾದಳು. ತನ್ನ ಪ್ರಾರ್ಥನೆಗೆ ಮೆಚ್ಚಿ, ತನ್ನನ್ನು ಉದ್ಧಾರಮಾಡಲು ಬಂದಿದ್ದ ಭಗವಂತನೆಂದೆಣಿಸಿದಳು. ಕಣ್ಣೆತ್ತಿನೋಡಿದಳು. ಆ ಮೂರ್ತಿಯು ಪ್ರಶಾಂತಮೂರ್ತಿಯಾಗಿರಲಿಲ್ಲ. ಅವತರಿಸಿದ ರುದ್ರಮೂರ್ತಿಯಾಗಿತ್ತು. ಆಶ್ಚರ್ಯವೂ, ಸಂತೋಷವೂ, ಭಯವೂ, ಸಹಾ ಒಮ್ಮೆಯೇ ಆ ಕುವರಿಯ ಮನವನ್ನು ಆವರಿಸಿಕೊಂಡವು. ಮೆಲ್ಲನೆ ಆ ವ್ಯಕ್ತಿಯನ್ನು ಸಮೀಪಿಸಿ, ಪಾದಕ್ಕೆ ನಮಿಸಲು ಉಪಕ್ರಮಿಸಿದಳು "ಪತಿತಳೇ! ನಿನ್ನ ಮಲಿನವಾದ ಸ್ಪರ್ಶದಿಂದ ನನ್ನನ್ನೇತಕ್ಕೆ ಮಲಿನ ಮಾಡುವಿ? ದೂರನಿಲ್ಲು." ಎಂಬ ಕಠೋರ ವಾಕ್ಯಗಳು ಆಕೆಯ ಕಿವಿಗೆ ಬಿದ್ದವು. ಅವು ಅಕಾಲದಲ್ಲಿ ಬಡಿದ ಸಿಡಿಲಿನಂತೆ

ಆಕೆಗೆ ಕಾಣಬಂದವು. ಅವುಗಳ ಅರ್ಥವು ಆಕೆಗೆ ತಿಳಿಯದೇ ಹೋಯಿತು. ಆ ವ್ಯಕ್ತಿಯಾದರೋ, ಕರಕರನೆಪಲ್ಗಡಿಯುತ್ತ ನಿಂತಿತ್ತು. ಸ್ವಲ್ಪ ಧೈರ್ಯವನ್ನವಲಂಬಿಸಿ " ದೊಡ್ಡಪ್ಪನವರೇ! ತಮ್ಮ ಪುತ್ರಿಯ ಸ್ಪರ್ಶವೇ ನಿಮಗೆ ಮಲಿನವಾಯಿತೆ ? " ಎಂದಳು.

**ಬಸಪ್ಪನಾಯಕ**:— ಕುಲಹೀನನಾದ ನರಸನಾಯಕನದಾಸಿಯ ಸ್ಪರ್ಶವು ಮಲಿನವಲ್ಲದೆ ಮತ್ತೇನು ?

**ಲಾವಣ್ಯವತಿ**:— ಅವಳೆಲ್ಲಿರುವಳು ?

**ಬಸಪ್ಪನಾಯಕ**:— ಓಹೋ! ನರಸನಾಯಕನ ಪಟ್ಟದರಸಿಯರೋ ತಾವು ?

**ಲಾವಣ್ಯವತಿ**:— ಏನು! ಏನು! ಜನಕಾ ಆ ನೀಚನ ಪಟ್ಟದರಸಿಯು ನಾನೆಂತಾಗುವೆನು ?

**ಬಸಪ್ಪನಾಯಕ**:— ಇನ್ನೂ ಇಲ್ಲವಾಗಬಹುದು.

**ಲಾವಣ್ಯವತಿ**:— ಎಂದಿಗೂ ಆಗಲಾರೆನು. ಆ ದುರಾತ್ಮನು ಬಿದಿಗೆಯ ದಿವಸ ಬರುವದೇನೋ ನಿಜ. ಅಷ್ಟರಲ್ಲಿ ಭಗವಂತನು ನನ್ನ ಪಾಲಿಗೆ ಬಂದರೆ ಸರೆ, ಇಲ್ಲವಾದರೆ ಮರಣವೇ ಶರಣ್ಯವಾಗುವದು.

**ಬಸಪ್ಪನಾಯಕ**:— ಇದು ಸತ್ಯವೇ, ?

**ಲಾವಣ್ಯವತಿ**:— ಮಗಳಲ್ಲಿ ನಿಮಗೆ ಅನುಮಾನವೇತಕ್ಕೆ ?

**ಬಸಪ್ಪನಾಯಕ**:— ನರಸನಾಯಕನನ್ನು ಮದುವೆಯಾಗಲು ನೀನು ಸಮ್ಮತಪಟ್ಟಿಲ್ಲವೇ ?

**ಲಾವಣ್ಯವತಿ**:— ಆ ರೀತಿ ನಿಮಗೆ ಯಾರಾದರೂ ಚಾಡಿ ಹೇಳಿದರೇನು ?

**ಬಸಪ್ಪನಾಯಕ** :— ಹೇಳಿರುವರು.

**ಲಾವಣ್ಯವತಿ** :— ನೀವು ನಂಬಿರುವಿರಾ ?

**ಬಸಪ್ಪನಾಯಕ** :— ನಂಬಬೇಕಾಯಿತು.

**ಲಾವಣ್ಯವತಿ** :— ನಾನು ಅಂಥಾ ವಂಶಕಳಂಕಳು ಆಗುವವಳಲ್ಲ. ನಿಮಗೆ ಯಾರೋ ಚಾಡೀಕೋರರು ಹೇಳಿದ ಮಾತಾಗಲಿ ಬೇರೆ ಅಲ್ಲ.

ಈ ಮಾತುಗಳು ಮುಗಿಯುವದಕ್ಕೆ ಮುಂಚೆಯೇ ರೌದ್ರಮೂರ್ತಿಯಾಗಿದ್ದ ಬಸಪ್ಪನಾಯಕನು ಶಾಂತರಸಭರಿತನಾಗಿ ಸಂತೋಷದಿಂದ ಮಗಳನ್ನೆತ್ತಿ ಮುದ್ದಾಡಿದನು. "ಮಗಳೇ ಬ್ರಹ್ಮಚರ್ಯ ವ್ರತವನ್ನು ಕೈಕೊಂಡಿದ್ದ ನೀನು ಪಿತೃಹಂತಕನಾದ ನರಸನಾಯಕನಿಗೆ ಅರಸಿಯಾಗಲು ಹಾಂಛಿಸಿದೆ ಎಂಬ ಚಾಡಿಯ ಮಾತನ್ನು ಕೇಳಿ, ನಾನು ಪಟ್ಟ ಸಂತಾಪವನ್ನು ಏನು ಹೇಳಲಿ! ಅಂಥಾ ಮಾನಗೇಡನ್ನು ಸಹಿಸಿ ಬದುಕಿರುವದು ದುರ್ಲಭವೆಂಬಂತೆ ಕಾಣಿಸಿತು. ನಿನ್ನ ಕೋಪಾಗ್ನಿಗೆ ನಿನ್ನನ್ನು ಬಲಿಕೊಡಬೇಕೆಂದೇ ಬಂದೆನು. ನಿನ್ನ ಸೌಶೀಲ್ಯವನ್ನು ನೋಡಿ ಪರಮಾನಂದಭರಿತನಾದೆನು." ಎಂದು ನುಡಿದನು.

**ಲಾವಣ್ಯವತಿ**:— ಆದರೆ ದೊಡ್ಡಪ್ಪನವರೇ, ಬಿದಿಗಿಯ ದಿವಸ ನರಸನಾಯಕನೇನೋ ನನ್ನನ್ನು ಲಗ್ನವಾಗಲು ಬರುತ್ತಿರುವನು. ನೀವಾದರೋ ಈ ದಿವಸದವರಿಗೂ, ನಿರ್ದಯರಾಗಿ ಸುಮ್ಮನಿದ್ದಿರಿ. ಈಗಲಾದರೂ ಅಬಲೆಯಾದ ನನ್ನನ್ನು ರಕ್ಷಿಸುವ ಭಾರವು ನಿಮ್ಮ ಮೇಲಿದೆ.

**ಬಸಪ್ಪನಾಯಕ** :— ನಾನೇನು ಮಾಡಲಿ ? ನನ್ನ ಸೈನ್ಯವು ನರಸನಾಯಕನ ಬಲದಲ್ಲಿ ಶತಾಂಶವಾದರೂ ಇಲ್ಲ. ನೀನಾದರೋ ಬ್ರಹ್ಮಚರ್ಯ ವ್ರತವನ್ನು ಕೈಕೊಂಡೆ.

**ಲಾವಣ್ಯವತಿ** :— ಜನಕಾ, ನರಸನಾಯಕನ ಜಾರಿಯಿಂದ ತಪ್ಪಿಸಿಕೊಳ್ಳಲು ಹುಡುಕಿದ ತಂತ್ರವಲ್ಲದೆ ನಿಜವಾಗಿಯು ಬ್ರಹ್ಮಚಾರಿಣಿಯಾಗಿ ಜೀವಯಾತ್ರೆಮಾಡಲು ನನ್ನಿಂದ ಸಾಧ್ಯವೇ?

**ಬಸಪ್ಪನಾಯಕ**:— ಹಾಗಾದರೆ, ನೀನು ಒಬ್ಬ ಪಾಳೆಯಗಾರನನ್ನು ವಿವಾಹವಾಗಲು ಒಪ್ಪಿಕೋಬೇಕು. ಆತನನ್ನು ಮೊರೆಹೊಕ್ಕು, ಈ ಪಾತಕನ ಹಾವಳಿಯನ್ನು ತಪ್ಪಿಸಿಕೊಳ್ಳಬಹುದು.

**ಲಾವಣ್ಯವತಿ**:—ಪಾರನ್ನು ಮೊರೆಹೊಗಲು ಆಜ್ಞೆಮಾಡುವಿರೋ ತಿಳಿಯಲಿಲ್ಲ. ನಾನು ಇದಕ್ಕೆ ಪೂರ್ವವೇ, ನನ್ನ ಮನವನ್ನು, ಓರ್ವ ವೀರನಿಗೆ ಅರ್ಪಿಸಿರುವೆನು. ಆತನು ನನ್ನನ್ನು ಸ್ವೀಕರಿಸಿ ಧನ್ಯಳನ್ನಾಗಿ ಮಾಡುವನೆಂಬ ಆಶೆಯಿಂದಲೇ ಇದುವರಿಗೂ ಪ್ರಾಣವನ್ನು ಹಿಡಿದುಕೊಂಡಿರುವೆನು. ಆತನ ಬಳಿಗೆ ಒಬ್ಬ ಚಾರನನ್ನಾದರೂ ಕಳುಹಿಸೋಣವೆಂದರೆ ನನ್ನಲ್ಲಿ ಇರುವವಳು, ಈ ವೃದ್ಧ ಸೇವಕಿಯೊಬ್ಬಳೇ.

**ಬಸಪ್ಪನಾಯಕ**.— ನೀನು ವರಿಸಿರುವ ಆ ವೀರನು ಯಾರು?

**ಲಾವಣ್ಯವತಿ** :— ರತ್ನಗಿರಿಯ ರಾಜನೂ, ಭುಜಂಗನಾಯಕನ ಪುತ್ರನೂ, ಆದ ರಾಮನಾಯಕನು.

**ಬಸಪ್ಪನಾಯಕ** :— ಮಗಳೇ! ಸಂಗನಾಯಕನ ಗರ್ಭಜಾತೆಯು ಯಾವ ವಸ್ತುವನ್ನು ಬೇಡಬೇಕೋ ಅದೇ ವಸ್ತುವನ್ನು ಬೇಡಿರುವೆ ರಾಮನಾಯಕನಿಗಿಂತಲೂ ವಾಂಛಿಸಬೇಕಾದ ವರನು ನಮ್ಮ ಈ ಪಾಳೆಯಗಾರರ ವಂಶದಲ್ಲಿ ಯಾವನೂ ಇಲ್ಲ. ಸಕಲ ಕಳಾಕೋವಿದನು. ಸದ್ಗುಣದರಾಸಿಯು. ಯುಕ್ತವಯಸ್ಕನು. ನರಸನಾಯಕನ ಆಗಮನವು ಸಮೀಪಿಸುತ್ತಬಂತು. ಆಲಸ್ಯಮಾಡಿದರೆ ಅನರ್ಥಗಳಿಗೆ ಕಾರಣವಾಗುವದು. ಬೇಗ ಹೋಗಿ ಆತನ ಉಡಿಯಲ್ಲಿ ಬೀಳೋಣ.

**ಲಾವಣ್ಯವತಿ**:— ಜನಕಾ! ಈಯೋಚನೆಯು ನನಗೆ ಸರಿಯಾದದ್ದಾಗಿ ಕಾಣಿಸುವದಿಲ್ಲ. ತಿರುಕರಂತೆ ನಾವು ಹೋಗಿ, ನಿನಗೆ ರಾಣಿಯಾಗಲು ಬಂದಿರುವೆನೆಂದ ಮಾತ್ರಕ್ಕೆ, ಆತನು ನನ್ನನ್ನು ಕೈಕೊಳ್ಳುವನು ಹೇಗೆ? ಒಂದುವೇಳೆ ಕೈಕೊಂಡರೂ ಅದು ನಮಗೆ ಮರ್ಯಾದೆಯೇ? ಆತಗೆತಾನೆ ಗೌರವವೇ? ಆತನಲ್ಲಿ ಔದಾರ್ಯವೂ, ನನ್ನ ಮೇಲೆ ಪ್ರೇಮವೂ, ಕನಿಕರವೂ ಇದ್ದದ್ದೇ ಆದರೆ, ತಾನೇ ಇಲ್ಲಿಗೆ ಬಂದು, ನರಸನಾಯಕನನ್ನು ಕೊಂದು, ಜಯಭೇರಿಯೊಡನೆ ನನ್ನನ್ನು ಒಯ್ಯಲಿ. ನಾವು ಸಹಾ ನರಸನಾಯಕನ ಹೊಡತಕ್ಕೆ ಕಂಗೆಟ್ಟು ದಿಕ್ಕುದಿಕ್ಕಿಗೆ ಓಡಿಹೋಗಿರುವ ಪ್ರಜೆಗಳನ್ನು ಸೇರಿಸಿಕೊಂಡು, ಮದುಮಗನಾಗಿ ಬರಲಿರುವ ರಾಮನಾಯಕನಿಗೆ ಉಚಿತರೀತಿಯಿಂದ ಆಹ್ವಾನವಿತ್ತು ಸತ್ಕರಿಸೋಣ. ಹಾಗೆ ಮಾಡುವದು ಉಭಯಪಕ್ಷದವರ ವಂಶಗೌರವಕ್ಕೆ ಸಮಂಜಸವಾಗಿರುವದು.

**ಬಸಪ್ಪನಾಯಕ**:— ಬೇಷ್ ಮಗಳೇ. ನಿನ್ನ ಶೀಲವನ್ನು ಎಷ್ಟು ಹೊಗಳಿದರೂ ಸಾಮಾನ್ಯ. ಹಾಗಾದರೆ, ರಾಮನಾಯಕನಿಗೆ ಈಗಲೇ ನಾನೊಂದು ಬಿನ್ನಹಪತ್ರವನ್ನು ಕಳುಹಿಸುವೆನು. ನೀನು ಸಹಾ ಒಂದು ಓಲೆಯನ್ನು ಬರೆದು ಕಳುಹಿಸು.

---

## ೩ನೆಯ ಪ್ರಕರಣ.

**ಪೆನುಗೊಂಡೆ**ಯ ನರಸನಾಯಕನ ಕಡೆಯಿಂದ ಪತ್ರಬಂದದ್ದು, ಅದರ ವಿಷಯದಲ್ಲಿ ರತ್ನಗಿರಿಯ ಮಂತ್ರೀಶ್ವರನಾದ ಭೀಮನಾಯಕನ ಅಂತಃಪುರದಲ್ಲಿ ಜರುಗಿದ ಸರ್ವವಿಷಯಗಳೂ, ಪಾಠಕರ ಮನಸದಲ್ಲಿ ಇರಬೇಕು. ಗುಣವತಿಯಾದ ರಂಗನಾಯಕಿಯು ನಾಥನಿಗೆ ಅರುಹಿದ ಉಪದೇಶವನ್ನು ಅಷ್ಟರಲ್ಲಿಯೇ ಮರೆಯಲೆಂತುಸಾಧ್ಯ? ಆ ದಿನ ಭೀಮನಾಯಕನು ರಾಜಾಸ್ಥಾನಕ್ಕೆ ಹೋಗಲಿಲ್ಲ. ಮಾರನೆಯ ದಿನ ಸಹಾ ಹೋಗಲು ಮೋರೆಯಿಲ್ಲದೇ ಹೋಯಿತು. ತಾನೆಣಿಸಿದ ರಾಜದ್ರೋಹವು ಮತ್ತಾರಿಗೂ ಗೋಚರವಾಗದೆ ಇದ್ದರೂ, ತನ್ನ ಅಂತಃಸಾಕ್ಷಿಯು ಸದಾ ಬಾಧಿಸುತ್ತಲೇ ಇತ್ತು. ತನ್ನ ದುರಾಲೋಚನೆಗೆ ತಾನೇ ನಾಚುತ್ತಿದ್ದನು.

ಮನಸ್ಸಿನ ವಿಕಾರವನ್ನು ಅಣಗಿಸಿಕೊಂಡು, ಮೂರನೆಯ ದಿವಸ ರಾಜಾಸ್ಥಾನಕ್ಕೆ ಹೋದನು. ಆತನ ವಿವಾಹ ಸಂಭ್ರಮದಲ್ಲಿ ರಾಜ್ಯಕಾರ್ಯಗಳು ಎಷ್ಟೋ ನಿಂತುಹೋಗಿದ್ದವು. ಮಂತ್ರಿಪುಂಗವನಿಲ್ಲದೆ, ರಾಮನಾಯಕನು ಯಾವಕಾರ್ಯಾಲೋಚನೆಯನ್ನು ಮಾಡುತ್ತಿರಲಿಲ್ಲ. ಆ ದಿನ ರಾಜನ ಓಲಗದಲ್ಲಿ ನಾಯಕರೆಲ್ಲರೂ ಉಚಿತಾಸನಗಳಲ್ಲಿ ಆಸೀನರಾಗಿದ್ದರು. ಗದ್ದುಗೆಯಮೇಲೆ ರಾಮನಾಯಕನು ದೇವೇಂದ್ರನಂತೆ ಮೆರೆಯುತ್ತಿದ್ದನು. ಬಲಭಾಗದಲ್ಲಿ ಸಮಾನಪೀಠದಲ್ಲಿ ಭೀಮನಾಯಕನು ಕುಳಿತಿದ್ದನು. ಎಲ್ಲರೂ ರಾಜ್ಯಾಂಗ ವಿಷಯಗಳ ಚರ್ಚೆಯಲ್ಲಿ ಮಗ್ನರಾಗಿದ್ದರು.

ದ್ವಾರಪಾಲಕನು ಬಂದು, ದಾವಪಾಳೆಯಗಾರನ ಕಡೆಯಿಂದಲೋ ವಾರ್ತಾವಹನೊಬ್ಬನು ಅಶ್ವಾರೂಢನಾಗಿ ಬಂದು, ಅರಸನ ದರ್ಶನವನ್ನು ಅತಿಬೇಗ ಮಾಡಿಸೆಂದು ಕೇಳುತ್ತಿರುವನಂತ ಬಿನ್ನಹ ಮಾಡಿದನು. ರಾಮನಾಯಕನು ಅವನನ್ನು ಗೌರವದಿಂದ ಬರಹೇಳಿನ್ನಲು,

ಆತನ ಅಪ್ಪಣೆಯ ಮೇರೆಗೆ, ಆ ವಾರ್ತಾವಹನು ರಾಜನ ಸನ್ನಿಧಿಗೆ ಬಂದನು. ಆಸ್ಥಾನಾಧಿಪತಿಗೆ ವಿನಯದಿಂದ ನಮಿಸಿ, ಎರಡು ಪತ್ರಗಳನ್ನು ಕೊಡಲು, ಆತನು ಓದಿನೋಡಿ, ಕಿಡಿಕಿಡಿಯಾದನು. ಕಾರಣವು ತಿಳಿಯದೆ, ಸಭಾಸದರೆಲ್ಲರೂ ವಿಧವಿಧವಾಗಿ ಊಹಿಸಹತ್ತಿದರು. ನಿಜವಾದ ವಿಷಯವು ಯಾರಿಗೂ ಗೋಚರವಾಗಲಿಲ್ಲ. ಒಬ್ಬರಾದರೂ ಉಸುರೊಯ್ಯುವರಲ್ಲ.

ಮೌನದಿಂದಾತನು ಆಪ್ತಸಚಿವನಿಗೆ ಆ ಪತ್ರಗಳೆರಡನ್ನು ಕೊಡಲು, ಭೀಮನಾಯಕನು ಓದಿ, ಮುಗುಳು ನಗೆಯಿಂದ ಈರೀತಿ ನುಡಿದನು. “ರಾಜಶೇಖರಾ! ಇದಕ್ಕಾಗಿ ನೀವು ಈರೀತಿ ಕೋಪಿಸುವದೇತಕ್ಕೆ? ತುಕ್ಕು ಹಿಡಿದು ಮೂಲೆಯಲ್ಲಿ ಬಿದ್ದಿದ್ದ ಖಡ್ಗಕಠಾರಿಗಳಿಗೆ ಈ ದಿವಸಕ್ಕೆ ಕೆಲಸ ಒದಗಿತೆಂದು ಸಂತೋಷಪಡಬೇಕಲ್ಲವೇ!

**ರಾಮನಾಯಕ** :— ಮಂತ್ರಿಪುಂಗವಾ! ಅದು ಹಾಗಿರಲಿ. ನೀಚನಾದ ನರಸನಾಯಕನು ಮಾಡುವ ಅಕೃತ್ಯಗಳು ಎಷ್ಟಾದರೂ ಸಹಿಸಬಹುದಾಗಲಿ, ಇಂಥಾ ಸ್ತ್ರೀ ಹಿಂಸೆಯನ್ನು ಸಹಿಸುವುದು ಹೇಗೆ? ಬಲವಂತನಾಗಬಹುದು. ಸಂಗನಾಯಕನನ್ನು ಗೆದ್ದ ಶೂರನೇ ಆಗಬಹುದು. ಲಾವಣ್ಯವತಿಯನ್ನು ಬಯಸುವದು ಮದ್ದಾನೆಯ ಮೆದಡನ್ನು ನರಿಯು ಬಯಸಿದಂತಲ್ಲವೇ?

**ಭೀಮನಾಯಕ** :— ಕೇಡುಗಾಲ ಸಮೀಪಿಸಿರುವುದು. ಅದರಿಂದಲೇ ಅವನಿಗೆ ಈ ಬುದ್ಧಿಯು ಹುಟ್ಟಿರುವುದು. ನಾವಿನ್ನು ಆಲಸ್ಯ ಮಾಡಲಾಗದು. ಬಿದಿಗೆಯು ಸಮೀಪಿಸಿತು.

**ರಾಮನಾಯಕ** :— ಪತ್ರವನ್ನು ನಾಯಕರೆಲ್ಲರೂ ಕೇಳಲಿ.

**ಪಂಡಿತರಲ್ಲೊಬ್ಬನು ಸಭೆಯವರೆಲ್ಲರು ಕೇಳುವಂತೆ, ಪತ್ರದ್ವಯ**ವನ್ನು ಓದಿದನು. **ಸಭಿಕರೆಲ್ಲರೂ ತದೇಕಧ್ಯಾನದಿಂದ ಕೇಳಿದರು.**

ಶ್ರೀಮದ್ರಾಜಪೂಜಿತರೂ, ಶ್ರೀ ರತ್ನಗಿರಿಗೆ ಅಧ್ಯಕ್ಷರೂ ಆದ ಶ್ರೀ ರಾಮನಾಯಕರವರ ಅಡಿದಾವರೆಗಳಿಗೆ. ತಮ್ಮ ಚರಣಸೇವಕ ಪಲ್ಲಂಡೆಯ ಬಸಪ್ಪನಾಯಕನು ಸಾಷ್ಟಾಂಗ ಪ್ರಣಾಮಗಳನ್ನುಮಾಡಿ ಮಾಡುವ ಬಿನ್ನಹ.

ಧನಮದ ಬಲಮದಕ್ಕೆ ಯವ್ವನಮದವು ಸೇರಲು, ಪೆನುಗೊಂಡೆ ನರಸನಾಯಕನು ಎನ್ನನುಜನಾದ ಸಂಗನಾಯಕನನ್ನು ಮೋಸದಿಂದ ಕೊಂದು, ನಿಡಗಲ್ಲು ರಾಜ್ಯವನ್ನೇ ನಾಶಮಾಡಿರುವನು. ಅಷ್ಟಕ್ಕೆ ತೃಪ್ತಿಹೊಂದದೆ, ನಿಜಜನಕನ ಮರಣದಿಂದೊದಗಿದ ಶೋಕಾನಲದಲ್ಲಿ ಬೆಂದು ಬತ್ತಿಹೋಗುತ್ತಿರುವ ಲಾವಣ್ಯವತಿಯನ್ನು ಬಲಾತ್ಕಾರದಿಂದ ಲಗ್ನವಾಗಲು ನಾಳಿನ ಬಿದಿಗೆಯ ದಿವಸ ನಿಡಗಲ್ಲಿಗೆ ಬರುವವನಿದ್ದಾನೆ. ಆ ಕನ್ಯಕಾಮಣಿಯು ನಿಮ್ಮನ್ನು ಆತ್ಮವಲ್ಲಭನನ್ನಾಗಿ ವರಿಸಿರುವಳೆಂಬುವದು ಇದರೊಡನೆ ಕಳುಹಿಸಿರುವ ಪತ್ರದಿಂದ ತಮಗೇ ವೇದ್ಯವಾಗುವುದು. ತಾವು ಸೈನ್ಯಸಮೇತರಾಗಿ ಸಕಾಲಕ್ಕೆ ಬಂದು, ಅರಿಬಲವನ್ನು ಕೊಂದು, ನಮ್ಮ ವಂಶಗೌರವವನ್ನು ಕಾಪಾಡಬೇಕೆಂದು ಸಹಸ್ರ ಪ್ರಣಾಮಗಳನ್ನು ಮಾಡಿ, ಬೇಡಿಕೊಂಬುವೆನು.

ಬಲೋಪೇತನಾದ ನರಸನಾಯಕನೊಡನೆ ಕಾದಲು ನನ್ನ ಎರಡುಸಾವಿರ ದಳದೊಡನೆ ಸಿದ್ಧನಾಗಿರುವೆನು. ನಿಡಗಲ್ಲು ಕೋಟೆಯು ಪ್ರಸ್ತುತ ಶೂನ್ಯವಾಗಿದ್ದರೂ, ತಮ್ಮ ಸಹಾಯವೇ ನಿಜವಾದರೆ, ನರಸನಾಯಕನ ಹಾವಳಿಗೆ ತಡೆಯಲಾರದೆ ಕಂಗೆಟ್ಟು ದಿಕ್ಕು ದಿಕ್ಕಿಗೆ ಹೋಗಿರುವ ಜನರೆಲ್ಲರೂ ಮೂರು ದಿವಸಗಳಲ್ಲಿ ಕೋಟೆಯನ್ನು ಹೊಕ್ಕು, ನಿಮಗೆ ಸಹಾಯವಾಗುವರು. ನಿಮ್ಮ ಸೈನ್ಯವು ಹನ್ನೆರಡು ಸಾವಿರ ಉಂಟೆಂದು ಕೇಳಬಲ್ಲೆನು. ವಿವಾಹವೆಂಬ ಹಿಗ್ಗಿನಿಂದ ಬರುತ್ತಿರುವ ನರಸನಾಯಕನು ತನ್ನ ಮೂವತ್ತುಸಾವಿರ ಸೈನ್ಯವನ್ನು ತರುವುದಿಲ್ಲ. ಆದುದರಿಂದ ಅವನನ್ನು ಸೋಲಿಸಿ, ಲಾವಣ್ಯವತಿಯನ್ನು ಸ್ವೀಕರಿಸಿ, ನಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತೇನೆ.

ನೀವು ನನ್ನ ಈ ಬಿನ್ನಹವನ್ನು ಮನ್ನಿಸದೇ ಹೋದರೆ, ರಾಕ್ಷಸ ಸ್ವಭಾವವುಳ್ಳ, ನರಸನಾಯಕನು ಲಾವಣ್ಯವತಿಯನ್ನು ಬಲಾತ್ಕರಿಸುವುದು ನಿಜ. ಆಕೆಯು ಆತ್ಮಹತ್ಯಮಾಡಿಕೊಳ್ಳುವುದು ಸತ್ಯ. ಮೊರೆ ಹೊಕ್ಕ ತರುಣಿಯನ್ನು ಕಾಯಲಾರದೇ ಹೋದನೆಂಬ ಅಪವಾದವು ನಿಮಗೆ ತಪ್ಪುವದಿಲ್ಲ.

ಮತ್ತೊಂದು ವಿಷಯವಿದೆ. ಪಾಳೆಯಗಾರರ ಸಂತತಿಯು ದಿನ ದಿನಕ್ಕೆ ಕ್ಷೀಣದಶೆಹೊಂದುತ್ತಲಿದೆ. ಕುತಂತ್ರದಿಂದ ಸ್ವಾಮಿಯನ್ನು ಕೊಂದು, ಸಿಂಹಾಸನಕ್ಕೆ ಬಂದ ನೀಚಕುಲಜನಾದ ನರಸನಾಯಕನ ಪ್ರಭಾವವು ಮುಂದುವರಿಯುತ್ತಲಿದೆ. ಅವನನ್ನು ನಾಶಗೊಳಿಸಿದ ಹೊರತು, ಪಾಳೆಯಗಾರರಿಗೆ ಪುರೋವೃದ್ಧಿ ಇರಲಾರದು. ಆ ಕಾರ್ಯವು ನಿಮ್ಮಿಂದ ಆಗಬೇಕಾಗಿದೆ. ನಿಮ್ಮನ್ನು ಬಿಟ್ಟರೆ, ಅದಕ್ಕೆ ತಕ್ಕ ಧೀರಾಗ್ರಣಿಗಳು ಮತ್ತಾರೂ ಕಾಣಬರುವುದಿಲ್ಲ. ಹಿಂಜರಿಯದೆ ನನ್ನ ಬಿನ್ನಹವನ್ನು ಮನ್ನಿಸಿ, ಅಭಯಪ್ರದಾನವನ್ನು ಮಾಡಬೇಕೆಂದು ಪರಿಪರಿವಿಧದಿಂದ ಪ್ರಾರ್ಥಿಸುವ,

ತಮ್ಮ ಚರಣಸೇವಕ,

**ಬಸಪ್ಪನಾಯಕ.**

ಎರಡನೇಪತ್ರವು ಈರೀತಿ ಇದ್ದಿತು.

ಶ್ರೀಮದ್ರಾಜಾಧಿರಾಜರೂ, ರತ್ನಗಿರಿ ಸಿಂಹಾಸನಾರೂಢರೂ, ಮನ್ಮನೋರಾಜ್ಯಕ್ಕೆ ಒಡೆಯರೂ, ಆದ ಶ್ರೀ ರಾಮನಾಯಕರ ದಿವ್ಯ ಪಾದಸರೋಜಂಗಳಿಗೆ. ಅಬಲೆಯು, ಅಸಹಾಯಳು, ಮಾತಾಪಿತೃ ವಿಹೀನಳು ಆದ ನಿಡಗಲ್ಲು ಸಂಗನಾಯಕನ ಪುತ್ರಿ ಲಾವಣ್ಯವತಿಯು ಅನೇಕ ಪ್ರಣಾಮಗಳನ್ನು ಮಾಡಿ, ಬಿನ್ನವಿಸುವದು ಏನಂದರೆ— ನನ್ನ ಜನಕನನ್ನುಕೊಂದು, ಕುಲಹೀನನಾದ ನರಸನಾಯಕನು

ಎನ್ನನ್ನು ತನಗರಸಿಯಾಗೆಂದು ಬಲಾತ್ಕರಿಸಿದನು. ಅವನ ಬಾಧೆಗೆ ತಾಳಲಾರದೆ, ನಾನು ಬ್ರಹ್ಮಚರ್ಯವ್ರತವನ್ನು ಅವಲಂಬಿಸಿರುವೆನೆಂದು ಹೇಳಲು, ಅವನು ಪರಿಹಾಸಮಾಡಿ ಹೀಗೆಂದನು:—"ಲಾವಣ್ಯವತೀ! ನೀನು ಎಷ್ಟು ಸಾರ್ಥಕನಾಮಧೇಯಳು! ನಿನ್ನ ಈ ಎಳೆಯಪ್ರಾಯವನ್ನು ಬ್ರಹ್ಮಚರ್ಯದಲ್ಲಿ ವ್ಯರ್ಥಮಾಡಿದರೆ ಏನುಫಲ? ಅದು ನಿನಗೆ ಸಾಧ್ಯವೇ? ಪಿತೃವಿಯೋಗದಿಂದ ನೀನು ಮತಿಹೀನಳಾಗಿರುವೆ. ಮನಸ್ಸನ್ನು ಸಮಾಧಾನಕ್ಕೆ ತಂದುಕೋ. ನಿನ್ನನ್ನು ಈಗ ನಾನು ಬಲವಂತಮಾಡಲೊಲ್ಲೆನು. ಮೂರು ತಿಂಗಳು ಅವಧಿಯನ್ನು ಕೊಟ್ಟಿರುತ್ತೇನೆ. ಅನಂತರ ಮನಃಪೂರ್ವಕ ನನ್ನನ್ನುವರಿಸಿ, ನನಗೆ ಅರಸಿಯಾಗಿ ಅತುಳವೈಭವದಿಂದ ಸುಖಿಸು. ತಪ್ಪಿದರೆ, 'ದರ್ಪದಿಂದ ನಿನ್ನನ್ನು ಕೊಂಡೊಯ್ದು ಮದುವೆಯಾಗುವೆನು." ಎಂದು ಹೇಳಿ ಹೊರಟು ಹೋದನು. ಅವನಗಡುವು ಪೂರೈಸಿತು. ಬರುವ ಬಿದಿಗೆಯ ದಿವಸ ನನ್ನನ್ನು ಮದುವೆಯಾಗಲು, ಅತಿ ಅಟ್ಟಹಾಸದಿಂದ, ರುಕ್ಮಿಣೀದೇವಿಯನ್ನು ಮದುವೆಯಾಗುವ ವಾಂಛೆಯಿಂದ ಬಂದ ದುಷ್ಟ ದಾನವನಂತೆ ಬರುವವನಿದ್ದಾನೆ.

ನಾನಾವರೋ, ರಸಿಕರೂ, ಪಾಳೆಯಗಾರರ ಸಾಂಪ್ರದಾಯದ ಸಿಧಿಗಳೂ, ಆದ ತಮಗೆ ಅರಸಿಯಾಗಬೇಕು. ತಪ್ಪಿದರೆ ಸ್ವಹಸ್ತದಿಂದ ಆತ್ಮಹತ್ಯವನ್ನು ಮಾಡಿಕೊಳ್ಳಬೇಕು. ಯುವತೀಜನ ಸಾಮಾನ್ಯವಾದ ನಾಚಿಕೆಯಿಂದಲೂ, ದರಿದ್ರದೇವತೆಯಿಂದ ಪೀಡಿಸಲ್ಪಡುತ್ತಿರುವ ನನ್ನನ್ನು ಕೈಕೊಳ್ಳಲು ತಾವು ಮನಸು ಕೊಡುವಿರೋ, ಇಲ್ಲವೋ, ಎಂಬ ಭೀತಿಯಿಂದಲೂ ಇದುವರಿಗೂ ನನ್ನ ಮನೋಗತ ವಾಂಛೆಯನ್ನು ತಿಳುಹಿಸದೇಹೋದೆನು. ಇನ್ನು ಸುಮ್ಮನಿರಲಾರೆನು. ನರಸನಾಯಕನನು ಪ್ರಯಾಣಮಾಡಿ ಬರುವವನಿದ್ದಾನೆ. ಆತ್ಮಹತ್ಯವೇ ಶರಣ್ಯವೆಂದು ನಾನಿರುವವೇಳೆಯಲ್ಲಿ, ನೀವು ದೀನಬಂಧುಗಳೆಂತಲೂ, ಅನಾಥರಕ್ಷಕರೆಂತಲೂ, ನಮ್ಮ ದೊಡ್ಡಪ್ಪನವರ ಬಾಯಿಂದ ಕೇಳಿ ಈ ಬಿನ್ನಹವನ್ನು ಮಾಡುತ್ತಿದ್ದೇನೆ.

ಮೃಗರಾಜನಿಗೆ ಅರ್ಹವಾದ ವಸ್ತುವನ್ನು ಒಂದು ನರಿಯು ವಾಂಛಿಸುವಂತೆ, ತಮಗೆ ಅರ್ಹಳಾದ ನನ್ನನ್ನು ನರಸನಾಯಕನು ಬಯಸಿರುವನು. " ಅರಿಗಳನ್ನು ಕೊಂದು ನಿನ್ನನ್ನು ವರಿಸುವೆ " ಎಂದು ಅಭಯವಾಕ್ಯವನ್ನು ದಯಪಾಲಿಸಿ, ನನ್ನನ್ನು ಉದ್ಧರಿಸಬೇಕು. ಇಲ್ಲವಾದರೆ "ಆತ್ಮಹತ್ಯವೇ ನಿನಗೆ ಪರಮಾವಧಿ" ಯೆಂದು ಅಪ್ಪಣೆಕೊಡಬೇಕು. ಅಲ್ಪಜ್ಞಾನಿಯಾದ ನಾನು ತಮ್ಮಂಥವರಿಗೆ ವಿಸ್ತರಿಸಿ ಬರೆಯಲಾರೆನು.

ತಮ್ಮ ಪಾದಸೇವಕಳು,

**ಲಾವಣ್ಯವತಿ.**

ಈ ಲೇಖನದ್ವಯವನ್ನು ಮತ್ತೊಮ್ಮೆ ಕೇಳಿದ ಕೂಡಲೆ ಭೀಮನಾಯಕನ ಮುಖಕಮಲವು ವಿಕಾಸಮಾನವಾಯಿತು. ತನ್ನ ಒಡೆಯನ ಮೇಲೆ ದ್ರೋಹಚಿಂತನೆಯನ್ನು ಮಾಡಿದ್ದ ಅಪರಾಧವನ್ನು ಕಳೆದುಕೊಳ್ಳಲು, ದ್ವಿಗುಣೀಕೃತವಾದ ಉತ್ಸಾಹದಿಂದ ಸಹಾಯ ಮಾಡಲು ನಿಶ್ಚಯಿಸಿಕೊಂಡನು.

**ರಾಮನಾಯಕ**:— ಭೀಮನಾಯಕಾ ! ನಿನ್ನ ಮುಗುಳುನಗೆಯಭಾವವೇನು ? ಕಡುಬಡವಿಯಾದ ಲಾವಣ್ಯವತಿಯು ನನ್ನನ್ನು ಕೋರಿದಳೆಂತಲೇ, ಅಥವಾ ಅಸಂಖ್ಯಾತವಾದ ನರಸನಾಯಕನ ಸೈನ್ಯವನ್ನು ನಾನು ಸೋಲಿಸುವೆನೆಂಬ ಭ್ರಾಂತಿಯು ಲಾವಣ್ಯವತಿಗೆ ಹುಟ್ಟಿತೆಂತಲೇ ? ತಡಮಾಡದೆ ಹೇಳು.

**ಭೀಮನಾಯಕ**:— ಒಡೆಯರ ಊಹೆಯು ಸರಿಯಾದುದಲ್ಲ. ಒರೆಯಲ್ಲಿ ಸ್ವಸ್ಥವಾಗಿ ನಿದ್ರೆಯನ್ನು ಮಾಡುತ್ತಿರುವ ಆಯುಧಗಳಿಗೆ ಇಷ್ಟುದಿನಕ್ಕೆ ಕೆಲಸ ಒದಗಿತೆಂದು ನಗುಬಂತಾಗಲಿ, ಬೇರೆ ಅಲ್ಲ. ಒಡೆಯರ ಅಪ್ಪಣೆಯೊಂದೇ ಕೊರತೆ. ನಾನು ಯುದ್ಧಕ್ಕೆ ಸಿದ್ಧನಾಗಿಯೇ ಇರುವೆನು.

ಮಿಕ್ಕನಾಯಕರ ಅಭಿಪ್ರಾಯವೇನೆಂದು ಕೇಳಲು, ಸಭೆಯವರೆಲ್ಲರೂ ಒಬ್ಬರಿಂದೊಬ್ಬರು ಮುಕುಲಿತಹಸ್ತರಾಗಿ ನಿಂತು, ಅಬಲೆಯಾದ ಲಾವಣ್ಯವತಿಯನ್ನು ಕಾಪಾಡುವುದು ಜನಸಮ್ಮತವೂ, ದೈವಸಮ್ಮತವೂ, ವೀರರ ಧರ್ಮವೂ ಎಂದು ಏಕರೀತಿಯಿಂದ ನುಡಿದರು.

**ರಾಮನಾಯಕ**:— ಹಾಗಾದರೆ, ಸರ್ವರೂ ಯುದ್ಧಕ್ಕೆ ಸಿದ್ಧರಾಗಬೇಕು. ಆಲಸ್ಯಮಾಡಲು ಅವಕಾಶವಿಲ್ಲ. ನಮ್ಮ ಸೈನ್ಯದಲ್ಲಿ ಸ್ವಲ್ಪ ಸೈನ್ಯವನ್ನೂ, ಕೆಲವುಮಂದಿ ವೀರರನ್ನೂ, ಕೋಟೆಯ ಸಂರಕ್ಷಣೆಗೆ ನಿಲ್ಲಿಸಿ, ಮಿಕ್ಕಸೈನ್ಯದೊಡನೆ ಭೀಮನಾಯಕನು ಪ್ರಯಾಣಮಾಡಬೇಕು. ಯುದ್ಧವಾಗದೇಯಿರದು. ನರಸನಾಯಕನು ಸಾಮಾನ್ಯನಲ್ಲ. ನಮ್ಮ ಸರ್ವಶಕ್ತಿಯನ್ನೂ ಉಪಯೋಗಿಸಿದರೇ ಹೊರತು, ಅವನನ್ನು ಸೋಲಿಸುವದು ಪ್ರಯಾಸವಾಗುವದು.

**ಭೀಮನಾಯಕ**:— ಪ್ರಭುಗಳಿಗೆ ನನ್ನದೊಂದು ವಿಜ್ಞಾಪನೆಯಿದೆ. ತಾವು ಅಪ್ಪಣೆ ಕೊಟ್ಟಂತೆ, ನರಸನಾಯಕನು ವಿಶೇಷಸೈನ್ಯದಿಂದಕೂಡಿರುವನು. ಯುದ್ಧವು ಸಹಜವೆಂದು ತಿಳಿದೊಡನೆಯೇ, ತನ್ನ ಸೈನ್ಯವನ್ನು ಪೆನುಗೊಂಡೆಯಿಂದ ಒಂದೆರಡು ದಿವಸಗಳಲ್ಲಿ ಬರಮಾಡಿಕೊಂಬುವನು. ಲಾವಣ್ಯವತಿಯನ್ನು ನಿರ್ಬಂಧದಿಂದ ಮದುವೆಯಾಗುವಾಗ್ಗೆ, ಬಸಪ್ಪನಾಯಕನು ಎದುರು ಬಿದ್ದಾನೆಂಬ ಯೋಚನೆಯನ್ನು ಅವನು ಮಾಡದೇಯಿರನು. ಆದಕಾರಣ, ಯುದ್ಧಕ್ಕೆ ತಯಾರಾಗಿಯೇ ಬರುವನು. ನಮ್ಮ ಸರ್ವಸೈನ್ಯವನ್ನು ತೆಗೆದುಕೊಂಡು ಹೋಗುವುದೇ ಯುಕ್ತವೆಂದು ನನಗೆ ತೋರುವದು. ಕೋಟೆಯ ರಕ್ಷಣೆಗೆ ಸೈನ್ಯವು ಬೇಕಿಲ್ಲ. ನಾವು ಇಲ್ಲದ ವೇಳೆಯಲ್ಲಿ, ಕೋಟೆಯನ್ನು ಆಕ್ರಮಿಕೊಳ್ಳಲು ಉಪಕ್ರಮಿಸುವ ವೈರಿವೀರರು, ನರಸನಾಯಕನು ತಪ್ಪಿದರೆ, ಬೇರೆ ಯಾರೂ ಇಲ್ಲ. ಆತನ ಮೇಲೆಯೇ ನಾವು ಹೋಗುತ್ತಿರುವೆವಾದಕಾರಣ, ಕೋಟೆಯ ರಕ್ಷಣೆಗೆ ಸೈನ್ಯವು ನಿಲ್ಲಿಸಬೇಕಾದ್ದಿಲ್ಲ. ಲಾವಣ್ಯವತಿಯ ಮೇಲೆ ದೃಷ್ಟಿಯ

ನ್ನಿಟ್ಟು, ನಿಡಗಲ್ಲಿಗೆ ಹೋಗುತ್ತಿರುವ ನರಸನಾಯಕನು ರತ್ನಗಿರಿಯ ಮೇಲೆ ಬೇರೆ ಸೈನ್ಯವನ್ನು ಕಳುಹಿಸುವನೆಂಬುವ ಭಯವಿಲ್ಲ.

**ರಾಮನಾಯಕ** :— ಭೀಮನಾಯಕಾ! ನೀನು ಹೇಳುವದು ನಿಜ. ನಾವೆಲ್ಲರು ಒಕ್ಕಟ್ಟಾಗಿ ಹೋಗಿ, ಒಮ್ಮೆಯೇ ನರಸನಾಯಕನ ಮೇಲೆ ಬಿದ್ದು, ಅವನನ್ನು ಸೋಲಿಸಬೇಕು

**ಭೀಮನಾಯಕ** :— ನಾನು ನಿಮ್ಮೊಡನೆ ಬರಲೆಣಿಸಲಿಲ್ಲ.

**ರಾಮನಾಯಕ** :— ನಿನ್ನ ಅಭಿಪ್ರಾಯವು ನನಗೆ ಗೊತ್ತಾಯಿತು. ಆದರೂ ರಾಜ್ಯಕಾರ್ಯವು ಒದಗಿದಾಗ, ಭೋಗಾಭಿಲಾಷೆಯನ್ನು ದೂರಮಾಡಬೇಕು. ಲಗ್ನಾನಂತರ ಇಷ್ಟು ಸ್ವಲ್ಪಕಾಲದಲ್ಲಿಯೇ, ನಿನ್ನನ್ನು ರಣರಂಗಕ್ಕೆ ಎಳೆಯಬೇಕಾಯಿತೆಂದು ನನ್ನ ಮನಸ್ಸಿಗೂ ನೋವಾಗಿರುವುದು. ಬಲವಂತನಾದ ನರಸನಾಯಕನನ್ನು ಕೆಣಕುವಾಗ ನಿನ್ನನ್ನು ಬಿಟ್ಟು ಹೋಗಲಾರೆನು. ನಿನ್ನ ವಿನಹಾ ಸೈನ್ಯಕ್ಕೆ ಅರ್ಹನಾದ ಅಧಿಪತಿಯೇ ಇಲ್ಲ. ಕಾಲವಿಳಂಬನೆ ಮಾಡದೆ, ಒಕ್ಕಟ್ಟಾಗಿ ಎಲ್ಲರೂ ಪ್ರಯಾಣಮಾಡಿ, ನರಸನಾಯಕನನ್ನು ಹಿಮ್ಮೆಟ್ಟಿಸಿ, ಲಾವಣ್ಯವತಿಯನ್ನು ತರೋಣ. ಅದಕ್ಕಾಗಿ, ಬಹಳ ದಿನಗಳು ಬೇಕಿಲ್ಲ. ಅನಂತರ ನಾವು ನಿರಾತಂಕವಾಗಿ ಸಕಲ ಭೋಗಗಳನ್ನು ಅನುಭವಿಸಿಕೊಂಡಿರಬಹುದು. ಈಗ ಮಾತ್ರ ಎರಡನೇ ಯೋಚನೆಯನ್ನು ಮಾಡದೆ, ನೀನು ಸಹಾ ಸಿದ್ಧನಾಗು. ರಣಭೇರಿಯನ್ನು ಹೊಡಿಸು. ಅನ್ಯಥಾ ಮಾರ್ಗವಿಲ್ಲ.

**ಭೀಮನಾಯಕ** :— ಪ್ರಭುಗಳು ನನ್ನ ಯೋಚನೆಯನ್ನು ಸರಿಯಾಗಿ ಊಹಿಸದೆ ಹೋದಿರಿ. ಭೋಗಾಪೇಕ್ಷೆಯು ನನಗೆ ಕಿಂಚಿತ್ತಾದರೂ ಇಲ್ಲ. ಒಡೆಯರ ಸಲುವಾಗಿ ಯುದ್ಧರಂಗದಲ್ಲಿ ನಿಂತು ಸರಿವೀರರೊಡನೆ ಕಾದಾಡುವುದೇ ನನಗೆ ಉತ್ಕೃಷ್ಟ ಭೋಗವು. ಅಪ್ಪಣೆಯಾದರೆ ನಾನು ತಮ್ಮೊಡನೆ ನಿಡಗಲ್ಲಿಗೆ ಬಾರದೆ, ಪಾಗೊಂಡೆಯ ಪ್ರಾಂತದಲ್ಲಿ ಹತ್ತುಸಾವಿರ ಸೈನ್ಯದಿಂದ ಹೊಂಚುಹಾಕಿ

ಕೊಂಡಿರುತ್ತೇನೆ. ಮಿಕ್ಕ ಎರಡುಸಹಸ್ರ ಸೈನಿಕರೊಡನೆ ತಾವು ನಿಡಗಲ್ಲಿಗೆ ಪ್ರಯಾಣವಾಗಿ ಹೋಗಿರಿ.

ಬಸಪ್ಪನಾಯಕನು ಸೈನ್ಯಯುತನಾಗಿ ಇದ್ದೇಯಿರುವನು. ಜೀಶ ಭ್ರಷ್ಟರಾಗಿ ಹೋಗಿದ್ದು, ಲಾವಣ್ಯಾವತಿಯ ಪ್ರೋತ್ಸಾಹದಿಂದ ಪುಸಹ ಕೂಡುವ ನಿಡಗಲ್ಲು ಸೈನ್ಯವು ನಿಮಗೆ ಸಹಾಯವಾಗುವದು. ಆ ಕೋಟೆಯಲ್ಲಿ ಜರುಗಬೇಕಾಗಿರುವ ಮಂಗಳಕಾರ್ಯವು ಯುದ್ಧದ ಅಶುಭದಿಂದ ಅಮಂಗಳವಾಗಬಾರದು. ನಾನು ಹತ್ತುಸಾವಿರ ಸೈನ್ಯದ ಬಲದಿಂದ ನರಸನಾಯಕನನ್ನು ಮುಂದುವರಿಯದಂತೆ, ಮಧ್ಯ ಮಾರ್ಗದಲ್ಲಿ ನಿಲ್ಲಿಸುವೆನು. ಬುದ್ಧಿಯಮಾತುಗಳಿಂದ ಹಿಂದಕ್ಕೆ ಕಳುಹಿ ಸಲು ಪ್ರಯತ್ನಿಸುವೆನು. ಅವನ ಬಲವೇ ಹೆಚ್ಚಾಗಿದರೂ, ನನ್ನ ಶರೀರದಲ್ಲಿ ಪ್ರಾಣವಿರುವತನಕ ಅವನನ್ನು ಮುಂದಕ್ಕೆ ಬಿಡುವದಿಲ್ಲ. ಅಷ್ಟರಲ್ಲಿ ನೀವು ವಿವಾಹಕಾರ್ಯವನ್ನು ಮುಗಿಸಿಕೊಳ್ಳಬಹುದು.

**ರಾಮನಾಯಕ**:— ಭೀಮನಾಯಕಾ! ನಿನ್ನ ಯೋಚನೆ ಯು ಬಹಳ ಶ್ಲಾಘನೀಯವಾದದ್ದು. ನಿನ್ನಂಥಾ ಸುಮಂತ್ರನಿರು ವಲ್ಲಿ ನನಗೆ ಯಾವಕೊರತೆ ತಾನೇ ಉಂಟಾದೀತು. ನೀನೇ ಹತ್ತು ಸಾವಿರ ಸೈನ್ಯದೊಡನೆ ಹಗೆಯುನ ಮೇಲೆ ಬಿದ್ದರೆ, ಅವನು ಹಿಂದಿರುಗಿ ಹೋಗುವನೆಂಬುವದರಲ್ಲಿ ಸಂಶಯವೇನಿದೆ? ತದನಂತರ ನಮ್ಮ ಕಾರ್ಯವು ಬಹಳ ಸುಲಭವಾಗುವದು. ಕೂಡಲೇ ಸೈನ್ಯವನ್ನು ಸಿದ್ಧ ಗೊಳಿಸು. ನಾವು ಇಲ್ಲದ ವೇಳೆಯಲ್ಲಿ ರಾಜ್ಯಕಾರ್ಯಗಳನ್ನು ಸರಿ ಯಾಗಿ ನಡೆಯಿಸಲು ತಕ್ಕವರನ್ನು ಏರ್ಪಾಟುಮಾಡು. ನಮಗೆ ಇಲ್ಲಿ ಯ ಹಂಬಲು ಇರಬಾರದು. ಆರೀತಿ ಇದ್ದಷ್ಟೇ ಅದರೆ, ನಮ್ಮ ಕಾರ್ಯಕ್ಕೆ ಅಂತರಾಯವಾಗಬಹುದು.

**ಭೀಮನಾಯಕ**:— ತಮ್ಮ ಅಪ್ಪಣೆಯಂತೆ ಸರ್ವವನ್ನೂ ಏರ್ಪಡಿಸುವೆನು. ಸಭಿಕರೇ! ನೀವೆಲ್ಲರೂ ಪ್ರಭುವಿನ ಅಪ್ಪಣೆ ಯನ್ನು ಕೇಳಿರುವಿರಷ್ಟೇ. ಇನ್ನು ನಿಮ್ಮ ಗೃಹಗಳಿಗೆ ಹೋಗಿರಿ.

ನಾಳಿನ ಪ್ರಯಾಣಕ್ಕೆ ಸಿದ್ಧರಾಗಿರಿ. ಸೈನಿಕರೆಲ್ಲರಿಗೂ ಅದೇ ರೀತಿ ಆಜ್ಞೆಮಾಡಿರಿ. ಸಭೆಯನ್ನು ನಾವು ಈ ದಿನಕ್ಕೆ ಈ ತೀರ್ಮಾನದಿಂದ ಮುಗಿಸೋಣ.

ಮಂತ್ರಿಯು ಹೇಳಿದಂತೆ ಸಭೆಯನಾಯಕರೆಲ್ಲರೂ, ಒಬ್ಬೊಬ್ಬರೇ ಪ್ರಭುವಿಗೆ ನಮಿಸಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

---

# ೪ ನೆಯ ಪ್ರಕರಣ.

**ಮೂರನೆಯ** ದಿವಸ ಸೂರ್ಯೋದಯಕ್ಕೆ ಮುಂಚೆಯೇ, ರತ್ನಗಿರಿಯ ಭಟರೆಲ್ಲರೂ, ಯುದ್ಧಸನ್ನದ್ಧರಾಗಿ ಪಟ್ಟಣದ ಮುಂದಿನ ಬೈಲಿನಲ್ಲಿ ಕೂಡಿದ್ದರು. ಹನ್ನೆರಡು ಸಹಸ್ರ ಸೈನ್ಯವು ಒಂದೇರಾತ್ರಿಯ ಪ್ರಯತ್ನದಿಂದ ಬಂದು ನಿಂತದ್ದು ನೋಡಿದರೆ ಭೂಮಿಯೇ ಹಡೆದಂತೆ ಇತ್ತು. ವಿಜಯ ಪತಾಕೆಗಳು ಹಾರಾಡುತ್ತಿದ್ದವು ಸೂರ್ಯ ಭಗವಾನನ ಕಿರಣ ಜಾಲದಲ್ಲಿ, ಆಯುಧಗಳು ಥಳಥಳನೆ ಹೊಳೆಯುತ್ತಿದ್ದವು. ಸೈನಿಕರ ಉತ್ಸಾಹಪೂರಿತವಾದ ಕೋಲಾಹಲವು ಕ್ಷಣಕ್ಷಣಕ್ಕೆ ಹೆಚ್ಚಾಗುತ್ತಿತ್ತು. ಪ್ರಭುವಾದ ರಾಮನಾಯಕನೂ ತಮಗಧಿಪತಿಯಾದ ಭೀಮನಾಯಕನೂ ಬರಲಿಲ್ಲವೆಂದು ಎದುರು ನೋಡುತ್ತಿದ್ದರು. ರಾಮನಾಯಕನು ಸಿದ್ಧನಾಗಿ ಭೀಮನಾಯಕನಿಗೋಸುಗ ಕಾದಿದ್ದನು. ಆತನು ಬರಲು ಆಲಸ್ಯವಾಗಿತ್ತು. ರಂಗನಾಯಕಿಯನ್ನು ಬಿಟ್ಟು ಬರಲಾರದಿದ್ದನು. ರಂಗನಾಯಕಿಯು ಚಿತ್ರದುರ್ಗದ ದುರ್ಗಾಧೀಶನ ಏಕಪುತ್ರಿಯು. ಜಟಂಗರಾಜನು ಆ ಕುಮಾರಿಯನ್ನು ಕುಮಾರನಂತೆ ಗಣಿಸಿ ಯುದ್ಧಾದಿ ಸಕಲಶಾಸ್ತ್ರಗಳಲ್ಲಿ ನಿಪುಣಳನ್ನಾಗಿ ಮಾಡಿದ್ದನು. ಆಕೆಯ ಪ್ರತಿಯೊಂದು ನಾಳದಲ್ಲಿಯೂ ವೀರರಕ್ತವು ಹರಿಯುತ್ತಿತ್ತು. ಯುದ್ಧವೆಂದರೆ ಆಕೆಗೆ ಉತ್ಸಾಹವು ಹೆಚ್ಚು. ನಾಥನನ್ನು ಪ್ರೋತ್ಸಾಹಗೊಳಿಸಿ ಜಾಗ್ರತೆ ತೆರಳೆಂದು ಹೇಳಿದಳು. ತಕ್ಕ ಉಡುಗರೆಗಳನ್ನು ಕೊಟ್ಟಿದ್ದಳು. ಸಕಲಾಯುಧಗಳನ್ನು ತಯಾರುಮಾಡಿಟ್ಟಿದ್ದಳು. ಭೀಮನಾಯಕನೇ ಆಕೆಯನ್ನು ಬಿಟ್ಟು ಬರಲಾರದೆ ತಡಮಾಡಿದ್ದನು. ಅವುದೋ ಒಂದು ನೆವವನ್ನು ಕಲ್ಪಿಸಿಕೊಂಡು ಆ ಸುಂದರೀಮಣಿಯ ಬಳಿಯಲ್ಲಿಯೇ ನಿಲ್ಲಬೇಕೆಂದು ಆತನ ಮನಸ್ಸು ಆಶೆಪಡುತ್ತಿತ್ತು. ಆದರೂ ಅಂಥಾ ಸುದ್ದಿ ಆ ವೀರವನಿತೆಯ ಮುಂದೆ ಸಾಗದೆಹೋಯಿತು. ಅದನ್ನು ಆಕೆಯ ಕಿವಿಗೆ ಹಾಕುವಷ್ಟು ಧೈರ್ಯವು ಆತನಿಗೆ ಇಲ್ಲದೇ ಹೋಯಿತು.

ನಿಲ್ಲಲೂ ಕೂಡ ಅವಕಾಶವಿಲ್ಲವೇ ಹೋಯಿತು. ತಿರುತಿರುಗಿ ಆ ಸರಸಿಜಾನನೆಯನ್ನು ನೋಡುತ್ತ ಮೆಲ್ಲಮೆಲ್ಲನೆ ರಾಮನಾಯಕನ ಬಳಿಗೆ ಹೋದನು. ಆತನು ಆರೀತಿ ತಿರುಗಿ ನೋಡಿದ ಸಮಯದಲ್ಲಿ ರಂಗನಾಯಕಿಯ ಮುಖದಲ್ಲಿ ಒಂದು ವಿಧವಾದ ನಿರಸನಭಾವವು ಹುಟ್ಟಿದ್ದಂತೆ ಆತನ ಮನಸ್ಸಿಗೆ ನಾಟುತ್ತಲಿತ್ತು.

ರಾಮನಾಯಕನು ಅಶ್ವಾರೂಢನಾಗಿ ನಗರದಿಂದ ಹೊರಟನು. ಆತನ ಪಾರ್ಶ್ವದಲ್ಲಿಯೇ ಚಲುವಾದ ಕುದುರೆಯನ್ನೇರಿ ಭೀಮನಾಯಕನು ಬಂದನು. ಸೈನಿಕರೆಲ್ಲರೂ "ಜಯ ಮಹಾರಾಜ, ರಾಮನಾಯಕನಿಗೆ ಜಯಾ" ಎಂದು ಹರಸಿದರು. ರಾಜಮಂತ್ರಿಗಳೀರ್ವರೂ ಮುಗುಳ್ನಗೆಯಿಂದ ಜಯಧ್ವನಿಯನ್ನಾಲಿಸುತ್ತಾ ಮಹಾಕಾಳಿಯ ಆಲಯಕ್ಕೆ ಹೋಗಿ ಜಗಜ್ಜನನಿಗೆ ನಮಿಸಿ ಧರ್ಮಸಮ್ಮತವಾದ ತಮ್ಮ ಕಾರ್ಯದಲ್ಲಿ ಜಯವನ್ನು ಪ್ರಸಾದಿಸೆಂದು ಬೇಡಿದರು. ಆನಂತರ ರಾಮನಾಯಕನು, ಗಂಭೀರವಾಣಿಯಿಂದ ಸೈನಿಕನಿಕರವನ್ನು ಕುರಿತು ಈರೀತಿ ನುಡಿದನು. "ವೀರ ಸುಭಟರಿರಾ! ಮಹಾಕಾಳಿಯ ಅನುಗ್ರಹವನ್ನು ಪಡೆದು ಯುದ್ಧಕ್ಕೆ ಹೋಗಿರಿ. ಯುದ್ಧರಂಗದಲ್ಲಿ ವಿಜೃಂಭಿಸಿ ಶತ್ರುಗಳನ್ನು ಚೆಂಡಾಡಿ ವಿಜಯ ಲಕ್ಷ್ಮಿಯನ್ನು ಕೈಕೊಂಡು ಬನ್ನಿರಿ. ನಮ್ಮ ಈ ಸಮರವು ಸರ್ವವಿಧದಲ್ಲಿಯೂ ಉತ್ತಮವಾದದ್ದು. ಒಬ್ಬ ಕುಲಗೇಡಿಯ ಹೊಟ್ಟೆಯಲ್ಲಿ ಹುಟ್ಟಿದ ನರಸನಾಯಕನು, ಪಾಳೆಯಗಾರರ ತೇಜಸ್ಸನ್ನೇ ಅಣಗಿಸಲು ಪ್ರಯತ್ನಿಸುತ್ತಿರುವನು. ನಾವು ಇದುವರೆಗೂ ಸುಮ್ಮನೆ ಇದ್ದದ್ದೇ ತಪ್ಪು. ಇನ್ನೂ ನಾವು ಸುಮ್ಮನಿದ್ದರೆ, ಅವನ ಪ್ರತಾಪವು ಪ್ರಬಲವಾಗುವದು. ಪಾಳೆಯಗಾರರ ವಂಶವೇ ಹಾಳಾಗುವದು. ದೃಢಚಿತ್ತರಾಗಿ ಹೋರಾಡಿ ಅವನನ್ನು ಸೋಲಿಸದೇ ಹೋದರೆ ನಮ್ಮನ್ನು ಉಳಿಯಗೊಡಿಸುವುದಿಲ್ಲ. ನಾನೇ ಹಿಂಜರಿದರೆ ಮಿಕ್ಕ ಸಣ್ಣಸಣ್ಣ ಕೋಟೆಗಳವರಪಾಡೇನು? ಪಾಳೆಯಗಾರರ ವಂಶವೇ ಅಂತರಿಸಬೇಕಾಗುವುದು. ಈಗ ನಾವು ಉಪಕ್ರಮಿಸಿರುವ ಮತ್ತೊಂದು ಘನಕಾರ್ಯವೇನೆಂದರೆ

ಅಬಲಾ ಮಾನರಕ್ಷಣೆಯು ! ಭಾರತೀಯರಿಗೆ ಅದಕ್ಕಿಂತಲೂ ಉತ್ಕೃಷ್ಟಕಾರ್ಯವು ದಾವುದೂ ಇಲ್ಲ. ಯುಗಯುಗಗಳಲ್ಲಿಯೂ ಸ್ತ್ರೀ ಮಾನ ರಕ್ಷಣೆಗೆ ಪ್ರಾಣಗಳನ್ನರ್ಪಣೆಮಾಡಿದ ಯೋಧಪುಂಗವರ ಸಚ್ಚರಿತ್ರೆಗಳನ್ನು ನಾವು ಕೇಳಿರುವೆವು. ಅವರ ಸಂಪ್ರದಾಯವನ್ನೇ ಅನುಸರಿಸಿ ನಾವು ಈಗ ಕದನ ಮಾಡೋಣ. ಅಬಲಾ ಮಾನರಕ್ಷಣೆಯನ್ನು ಮಾಡೋಣ. ಆ ಅಬಲೆಯಾದರೋ! ಸಾಮಾನ್ಯಳಲ್ಲ. ಪಾಳೆಯಗಾರರಲ್ಲೆಲ್ಲಾ ಶ್ರೇಷ್ಠನೆನಿಸಿಕೊಂಡಿದ್ದ ನಿಡಗಲ್ಲು ಸಂಗನಾಯಕನ ಪುತ್ರಿಯು, ವೀರವನಿತೆಯು, ಸುಕುಮಾರಿಯು, ಸೌಂದರ್ಯವತಿಯು. ಸದ್ಗುಣಗಳ ರಾಸಿಯು. ಮತ್ತೊಂದು ವಿಶೇಷ, ಆಕೆಯು ನನಗರಸಿಯಾಗಲಿರುವಳು. ಅಂದರೆ ನಿಮಗೆ ಮಾತೃಸ್ಥಾನವನ್ನಾಕ್ರಮಿಸಿಕೊಳ್ಳಲಿರುವಳು. ಆಕೆಯ ಮಾನಧನವನ್ನು ಕಾಪಾಡಲು ನೀವು ಪ್ರಾಣಗಳಮೇಲೆ ಲಕ್ಷ್ಯವಿಡದೆ ಹೋರಾಡಬೇಕು. ನಾನು ಆಕೆಯ ಸಲುವಾಗಿ ಎರಡುಸಾವಿರ ಮಂದಿಯೊಡನೆ ನಿಡಗಲ್ಲಿಗೆ ಹೋಗುತ್ತೇನೆ. ಮಿಕ್ಕ ಹತ್ತುಸಾವಿರ ಸೈನಿಕರು ಭೀಮನಾಯಕನ ಆಧಿಪತ್ಯದಲ್ಲಿ, ಪಾವಗಡಾಕ್ಕೆ ಹೋಗಿ, ಹೊಂಚುಹಾಕಿಕೊಂಡಿದ್ದು, ನರಸನಾಯಕನನ್ನು ಹಿಮ್ಮೆಟ್ಟಿಸಬೇಕು. ಆ ಭಾರವನ್ನು ನಿಮ್ಮಮೇಲಿಟ್ಟು, ಸರ್ವಾಧಿಕಾರವನ್ನು ಭೀಮನಾಯಕನಿಗೆ ಕೊಟ್ಟು, ನಾನು ಹೋಗುತ್ತೇನೆ. ಆತನ ಆಜ್ಞಾಬದ್ಧರಾಗಿ ನೀವು ಕಾರ್ಯವನ್ನು ಸಾಧಿಸುವಿರೆಂದು ನಂಬಿರುತ್ತೇನೆ." ಎಂದು ನುಡಿಯಲು, ಸೈನಿಕರೆಲ್ಲರೂ ಏಕಧ್ವನಿಯಿಂದ "ಜಯ ಮಹಾರಾಜರಿಗೆ ಜಯಾ, ಮಹಾಕಾಳಿಗೆ ಜಯಾ" ಎಂದು ಜಯಧ್ವನಿಗೈದರು. ರಾಮನಾಯಕನು ಒಮ್ಮೆ ಭೀಮನಾಯಕನ ಕಡೆಗೆ ನೋಡಿದನು. ಆ ನೋಟವು ಭಾವಗರ್ಭಿತವಾಗಿತ್ತು. ಎಲ್ಲಾ ಭಾರವು ನಿನ್ನ ಮೇಲೆ ಇದೆ ಎಂದು ಹೇಳದಲೇ ಹೇಳುತ್ತಿತ್ತು. ಭೀಮನಾಯಕನು ಅದನ್ನು ಗ್ರಹಿಸಿ,— "ಸ್ವಾಮಿಕಾರ್ಯಕ್ಕೆ ಯಾವಲೋಪವೂ ಬರಲಾರದು. ತಾವು ದಯಮಾಡಿರೆಂದು" ಕಳುಹಿಸಿ ಕೊಟ್ಟನು. ರಾಮನಾಯಕನು ನಿಡಗಲ್ಲಿಗೆ ಪ್ರಯಾಣ ಮಾಡಿದನು.

ಮಿಕ್ಕ ಸೇನಾ ಸಮೂಹವು ನರಸನಾಯಕನ ಮೇಲೆ ಹೊರಡಲು ಹೂಂಕರಿಸುತ್ತಿತ್ತು. ರಾಮನಾಯಕನು ನಿಡಗಲ್ಲಿಗೆ ಹೊರಟು ಹೋಗಿದ್ದನು. ಭೀಮನಾಯಕನು ಅಪ್ಪಣೆ ಕೊಡಲಿಲ್ಲ. ಏತಕ್ಕೋ ಸುಮ್ಮನಿದ್ದನು. ಇಷ್ಟೇ ಅಲ್ಲ. ಆತನ ಮುಖದಲ್ಲಿ ನಿರುತ್ಸಾಹವು ವ್ಯಕ್ತವಾಗಿತ್ತು. ಇದ್ದಕ್ಕಿದ್ದಂತೆಯೇ ಕುದುರೆಯನ್ನು ತಿರುಗಿಸಿ ಪಟ್ಟಣವನ್ನು ಹೊಕ್ಕನು. ಸೈನಿಕರು ಬೆರಗಾಗಿ ನೋಡುತ್ತಾ ನಿಂತರು. ರಾಮನಾಯಕನು ಅತ್ಯಲ್ಪ ಸೈನ್ಯದೊಡನೆ ನಿಡಗಲ್ಲು ಮಾರ್ಗವನ್ನು ಹಿಡಿದು ಹೋಗಿದ್ದನು. ಬಲೋಪೇತನಾದ ನರಸನಾಯಕನು ನಿಡಗಲ್ಲು ಸೇರಿದ್ದೇ ನಿಜವಾದರೆ, ರಾಮನಾಯಕನ ಕಾರ್ಯವು ಕೈಗೂಡದೇ ಹೋಗುವುದಲ್ಲದೆ, ಪ್ರಾಣದಿಂದ ತಿರುಗಿ ಬರುವುದು ಸಹಾ ಅಸಂಭವವು. ಭೀಮನಾಯಕನು ಕಾರಣವನ್ನು ಕೂಡ ತಿಳುಹಿಸದೆ ಕೋಟೆಯನ್ನು ಹೊಕ್ಕನು. ಹತ್ತುಸಾವಿರ ದಂಡನ್ನು ನಡೆಯಿಸುವ ಶಕ್ತಿಯು ತಮ್ಮಲ್ಲಿ ಯಾರಿಗೂ ಇರಲಿಲ್ಲ. ನಿಮಿಷವಾದರೂ ನಿದಾನ ಮಾಡಲು ಅವಕಾಶವಿರಲಿಲ್ಲ. ಸೈನ್ಯವೆಲ್ಲವೂ ಭೀತಿಯಿಂದ ನಿಸ್ತಬ್ಧವಾಗಿ ನಿಂತಿತ್ತು.

ಭೀಮನಾಯಕನು ಹಿಂದಿರುಗಿ ಬರುವದನ್ನು ನೋಡಿ ರಂಗನಾಯಕಿಯು ಆಶ್ಚರ್ಯಮಗ್ನಳಾದಳು. ಆತನು ಅಂತಃಪುರಕ್ಕೆ ಬಂದೊಡನೆಯೇ, "ನೀವು ಈರೀತಿ ಹಿಂದಿರುಗಿ ಬರಲು ಕಾರಣವೇನು ?" ಎಂದು ಆತುರದಿಂದ ಕೇಳಿದಳು. "ನೀನು" ಎಂದು ಭೀಮನಾಯಕನು ಬದುಲಾಡಿದನು.

**ರಂಗನಾಯಕಿ**:— ನಾನೇನು ಮಾಡಿರುವೆನು?

**ಭೀಮನಾಯಕ**:— ಮೋಹಪಾಶದಿಂದ ಹಿಂದಕ್ಕೆ ಎಳೆದಿರುವೆ.

**ರಂಗನಾಯಕಿ**:— ಇದೇನು? ಹೀಗೆ ಮಾತನಾಡುವಿರಿ.

**ಭೀಮನಾಯಕ**:— ಏನಂದರೆ, ನಾನೇನು ಹೇಳಲಿ ? ಮೂರುದಿವಸಗಳಾದರೂ ನಿನ್ನೊಡನೆ ಸುಖಿಸದೆ ಕದನರಂಗಕ್ಕೆ ಹೊರಡಬೇಕಾಯಿತು. ನಾನು ತಿರುಗಿ ಬರುವೆನೆಂಬ ಧೈರ್ಯವಿಲ್ಲ. ಪೆನುಗೊಂಡೆಯೆಂದರೆ ಸಾಮಾನ್ಯದ ರಾಜ್ಯವಲ್ಲ. ನರಸನಾಯಕನ ಸೈನ್ಯವು ಅಗಣಿತವಾದದ್ದು. ಆತನೋ! ಅನೇಕಾನೇಕ ಯುದ್ಧಗಳಲ್ಲಿ ಗೆದ್ದ ಶೂರನು. ಸಾಯೋಪಾಯಗಳ ನಿಧಿ. ಯುದ್ಧದಲ್ಲಿ ಆರಿತೇರಿದ ವೀರನು. ಒಡೆಯನಿಗೋಸುಗ ಕಾದಾಡಿ ಕಾಲನಿಗೆ ಅತಿಥಿಯಾಗಬೇಕಾದೀತೆಂಬ ಭೀತಿಯು ಹುಟ್ಟಿರುವದು.

ಈ ಮಾತುಗಳು ರಂಗನಾಯಕಿಯ ಕಿವಿಗೆ ಸವಿಯಾಗಿರಲಿಲ್ಲ. ಕಠೋರ ವಾಕ್ಯಗಳಿಂದ ಪತಿಯ ಮನಸ್ಸನ್ನು ನೋಯಿಸುವುದು ಆಕೆಗೆ ಬೇಕಿರಲಿಲ್ಲ. ಗಂಭೀರವಾಗಿ ಈ ರೀತಿ ನುಡಿದಳು " ನಾಥಾ ! ಸ್ವಾಮಿಕಾರ್ಯದಲ್ಲಿ ಮರಣವೇ ನಿಮಗೆ ಪ್ರಾಪ್ತವಾದರೆ ನೀವು ಧನ್ಯರಾಗುವಿರಿ. "

**ಭೀಮನಾಯಕ**.— ಏನು, ಏನು ? ನನಗೆ ನೀನೇನು ಕೋರಿದೆ ?

**ರಂಗನಾಯಕಿ** :— ವೀರ ವನಿತೆಯು ಕೋರಬೇಕಾದದ್ದನ್ನೇ ಕೋರಿರುವೆನು.

**ಭೀಮನಾಯಕ** :— ರಂಗನಾಯಕೀ ! ಸರ್ವಸೌಖ್ಯದಾಯಿನಿಯು ನೀನೆಂದು ನಂಬಿರಲು, ಎಂಥಾ ಕೋರಿಕೆಯನ್ನು ಕೋರಿದೆ!

**ರಂಗನಾಯಕಿ** :— ನಾಥಾ ! ಏನಿದು. ಇಂಥಾ ಮಾತುಗಳಿಂದ ಕಾಲವಿಳಂಬನೆ ಮಾಡುತ್ತ ನಿಂತಿರಿ. ಪ್ರಭುವರನಾದರೋ ! ಪುರವನ್ನು ಬಿಟ್ಟು ಹೊರಟುಹೋದನು. ನೀವು ನರಸನಾಯಕನ ಹಾದಿಯನ್ನು ಕಾಯದಿದ್ದರೆ, ಅನಾಹುತಗಳಾಗುವವು. ಅರಸನ ಪ್ರಾಣಕ್ಕೆ ಅಪಾಯವಾಗುವದು. ಆಲಸ್ಯ ಮಾಡದೇ ಹೊರಡಬೇಕಾ

ಗಲಿ, ಇಂಥಾ ಯೋಚನೆಯಲ್ಲಿ ಕಾಲಹರಣ ಮಾಡಬಹುದೇ? ಸ್ವಾಮಿದ್ರೋಹವು ಇದಕ್ಕಿಂತಲೂ ಹೆಚ್ಚು ಉಂಟೇ? ಇದಕ್ಕಿಂತಲೂ ವೀರಮರಣವು ಉತ್ತಮವಲ್ಲವೇ? ಬೇಗ ಹೊರಡಿರಿ. ಬೇರೆ ಮಾತನಾಡಿದರೆ ನನ್ನಾಣೆ"

ಭೀಮನಾಯಕನು ಸಮ್ಮನೆ ಹಿಂದಿರುಗಿದನು. ರಂಗನಾಯಕಿಯ ಕಡೆಗೆ ನೋಡಲಾರದ ಹೋದನು. ಮಾತನಾಡಲು ಬಾಯಿ ಬಾರದೆ ಹೋಯಿತು. ಹಿಂದಿರುಗಿಬಂದು ಸೈನಿಕರಿಗೆ ಪ್ರಯಾಣಕ್ಕೆ ಅಪ್ಪಣೆ ಕೊಟ್ಟನು. ಆತನ ಮನಸುಮಾತ್ರ ಸ್ಥಿರವಾಗಿರಲಿಲ್ಲ. ತನ್ನ ಅರಸಿಯು ಆಡಿದ ಮಾತುಗಳನ್ನು ನೆನೆನೆನೆದು ವಿಧವಿಧವಾಗಿ ಯೋಚಿಸಿದನು. ಧರ್ಮಪತ್ನಿಯಾದ ರಂಗನಾಯಕಿಯು ಕೋರಬೇಕಾದ ಕೋರಿಕೆಗಳಿಷ್ಟಿರಲಿಲ್ಲ? ಕೋರಿ ಕೋರಿ, ನನ್ನ ಮರಣವನ್ನೇ ಕೋರಬೇಕೇ! ಆಕೆಯ ಮನಸ್ಸಿನ ಯೋಚನೆಯೇನೋ; ತಿಳಿಯದೇ ಹೋಯಿತು. ನನಗಾದರೋ! ಹಿಂದಿರುಗಿ ಬರುವೆನೆಂಬ ಧೈರ್ಯವಿಲ್ಲ. ನನ್ನ ಮರಣಾನಂತರ ಸಹಗಮನವನ್ನಾದರೂ, ಮಾಡುವಳೋ ಅಥವಾ .... ಶಿವಶಿವಾ! ಎಂಥಾ ಯೋಚನೆಗೆ ಅವಕಾಶವನ್ನು ಕೊಟ್ಟೆನು. ಕ್ಷತ್ರಿಯ ವಂಶೋತ್ಪನ್ನಳಾದ ರಂಗನಾಯಕಿಯು ಅನ್ಯಥಾ ಯೋಚಿಸುವಳೆಂದರೇನು? ಐಹಿಕ ಸುಖಾಪೇಕ್ಷೆಯುಳ್ಳ ತರುಣಿಯಾಗಿದ್ದರೆ, ರತ್ನಗಿರಿ ಸಿಂಹಾಸನದ ಆಸೆಯಿಂದ ನಾನು ರಾಮನಾಯಕನನ್ನು ಕೊಲ್ಲುವೆನೆಂದವೇಳೆಯಲ್ಲಿ, ನನ್ನ ಪ್ರಯತ್ನಕ್ಕೆ ಪ್ರೋತ್ಸಾಹಕೊಡುತ್ತಿದ್ದಳು.. ನೀತಿಮಾರ್ಗವನ್ನೇತಕ್ಕೆ ಬೋಧಿಸುತ್ತಿದ್ದಳು? ಹ್ಯಾಗಾದರೂ ಸರಿ. ಎಂದು ಒಂದು ಪತ್ರವನ್ನು ಬರೆದು ರಂಗನಾಯಕಿಗೆ ಕೊಡೆಂದು ಒಬ್ಬ ಭಟನೊಡನೆ ಕಳುಹಿಸಿ ಕೊಟ್ಟನು. ಮುಂದರಿದು ಹೋಗುತ್ತಿದ್ದ ಸೈನಿಕರು ನಾಯಕನು ಕದಲದೆ ನಿಂತದ್ದು ನೋಡಿ, ಮತ್ತೊಮ್ಮೆ ಬೆರಗಾಗಿ ನಿಂತರು.

ಭಟನು. ಮಂತ್ರಿಯ ಅಂತಃಪುರವನ್ನು ಹೊಕ್ಕು ನೋಡಿದನು. ಅಲ್ಲಿ ರಂಗನಾಯಕಿಯು ಕಾಣದೇ ಹೋದಳು. ಅಂತಃಪುರ ಮಧ್ಯ

ಭಾಗದಲ್ಲಿ ಒಂದು ಮಹಾಕಾಳಿಯ ವಿಗ್ರಹವಿತ್ತು. ಅದು ವಿವಿಧಾಲಂಕಾರ ಭೂಷಿತವಾಗಿತ್ತು. ಪರಿಚಾರಿಣಿಯರು ಅದರ ಸುತ್ತಲೂ ಮುಸುಗಿದ್ದರು. ಅವರ ನಡುವೆ ನಾರುಸೀರೆಯನ್ನುಟ್ಟು, ಓರ್ವ ಸುಕುಮಾರಿಯು ಪದ್ಮಾಸನಾಸೀನಳಾಗಿ ತದೇಕಧ್ಯಾನದಿಂದ ಇಷ್ಟದೇವತಾಪ್ರಾರ್ಥನೆಯಲ್ಲಿದ್ದಳು ಈ ನೂತನ ವ್ಯಕ್ತಿಯನ್ನೂ, ಅಂತಃಪುರದಲ್ಲಿ ಈ ಪೂಜಾವಿಧಾನವನ್ನೂ ನೋಡಿ, ಭಟನು ಬೆರಗಾದನು. ಅಲ್ಲಿಯ ಸ್ತ್ರೀಯೋರ್ವಳನ್ನು ಪ್ರಶ್ನೆಮಾಡಿ, ಎರಡು ಘಳಿಗೆಗಳ ಹಿಂದೆ ರತ್ನಾಲಂಕಾರಭೂಷಿತಳಾಗಿ ಮೆರೆಯುತ್ತಿದ್ದ ರಂಗನಾಯಕಿಯೇ ಆ ಭಕ್ತೆಯೆಂದು ತಿಳಿದುಕೊಂಡನು. ಅಮ್ಮನವರಿಗೆ ತನ್ನ ಆಗಮನವನ್ನು ತಿಳುಹಿಸಿ, ಅವರ ಅನುಮತಿಯಿಂದ ಮುಂದಕ್ಕೆ ಬಂದು, ನಮಿಸಿ, ಒಡೆಯನ ಲೇಖವನ್ನು ಕೊಟ್ಟನು. ಆಕೆಯು ಅದನ್ನು ಓದಿ ಮುಗಿಸಿದಳು. ಮತ್ತೊಮ್ಮೆ ಓದಿಕೊಂಡಳು.

ಮನ್ಮನೋಹಾರಿಣಿಯಾದ ರಂಗನಾಯಕಿಗೆ,

ಪ್ರಿಯೇ !

ನಿನ್ನೊಡನೆ ಸೌಖ್ಯವನ್ನು ಬಿಟ್ಟು ಯುದ್ಧಕ್ಕೆ ಹೊರಡಲು ಹಿಂಜರಿಯುತ್ತಿರುವೆನು. ಜಯಾಪಜಯಗಳು ದೈವಾಧೀನವಾದುವು. ನನ್ನ ಬಲವನ್ನೂ ಹಗೆಯನ ಸೈನ್ಯವನ್ನೂ ನೋಡಿದರೆ ಪರಾಜಯವೇ ನನ್ನದೆಂದು ತಿಳಿಯುತ್ತದೆ. ನೀನಾದರೋ! ಭಾವನಗರ್ಭಿತವಾದ ಮಾತುಗಳನ್ನಾಡಿ ನನ್ನ ಮನಸ್ಸಿಗೆ ಹಾರಾಟವನ್ನು ಹಚ್ಚಿರುವೆ. ನನ್ನ ಮರಣಾನಂತರ ಕ್ಷತ್ರಿಯ ಧರ್ಮಾಚರಣೆಯಂತೆ ಸಹಗಮನವನ್ನಾದರೂ ಮಾಡುವಿಯೋ ಇಲ್ಲವೋ ? ಎಂಬ ಅನುಮಾನವು ಮನಸ್ಸಿನಲ್ಲಿ ಉಂಟಾಗಿರಲು ನಾನು ಈ ರೀತಿ ಬರೆಯಬೇಕಾಯಿತು. ನನ್ನ ಮರಣವಾರ್ತೆಯು ತಿಳಿದಕೂಡಲೇ ನೀನು ಅಗ್ನಿಪ್ರವೇಶವನ್ನು ಮಾಡಬೇಕೆಂದು ನನ್ನ ಆಜ್ಞೆ ಇರುವುದು.

ಮನೋವಲ್ಲಭ,

**ಭೀಮನಾಯಕ.**

ರಂಗನಾಯಕಿಯು ಬಹಳವಾಗಿ ಮನಸ್ಸು ನೊಂದುಕೊಂಡಳು. "ಅಯ್ಯೋ! ನನ್ನ ವಲ್ಲಭವನಿಗೆ ಎಂಥಾ ಸಂಶಯ ಹುಟ್ಟಿತು? ತಾನು ಯುದ್ಧದಲ್ಲಿ ಮಡಿದರೆ ನಾನು ಸಹಗಮನಮಾಡಬೇಕಾದ ವಿಷಯ ವನ್ನು ಮತ್ತೊಬ್ಬರಿಂದ ಹೇಳಿಸಿಕೊಳ್ಳುವೆನೇ? ಛೀ! ಇಂಥಾ ಯೋ ಚನೆಯು ಅವರ ಮನಸ್ಸಿನಲ್ಲಿ ಹೊಗಬಾರದಿತ್ತು. ಇದಲ್ಲದೆ, ಪ್ರಸ್ತುತ ತನ್ನ ಕರ್ತವ್ಯವಾದರೋ! ಬಹಳ ಕಠಿಣವಾದದ್ದು. ತನ್ನ ಮಂ ತ್ರೀಂದ್ರನು ಶತ್ರುಗಳನ್ನು ಮಧ್ಯಮಾರ್ಗದಲ್ಲಿ ಹಿಮ್ಮೆಟ್ಟಿಸುವನೆಂಬ ಭರವಸೆಯಿಂದ ರಾಮನಾಯಕನು ಸೈನ್ಯಹೀನನಾಗಿ ನಿಡುಗಲ್ಲಿಗೆ ಹೋಗಿ ರುವನು. ನರಸನಾಯಕನು ಮುಂದರಿದು ನಿಡುಗಲ್ಲು ಸೇರಿದರೆ ಉತ್ತ ಮಕುಲಜೆಯಾದ ಲಾವಣ್ಯಾವತಿಯು ಆ ದಾಸೀ ಗರ್ಭಜಾತನ ಪಾಲಾ ಗುವುದಲ್ಲದೆ, ಒಡೆಯನಾದ ರಾಮನಾಯಕನಿಗೆ ಮರಣವು ತಪ್ಪದು. ಇಂಥಾ ಅನಾಹುತಗಳಿಗೆ ನಾನೇ ಕಾರಣವಾದಂತಾಗುವದು. ಏನು ಮಾಡಲಿ. ಜಗದಂಬೇ! ಮಹಾದೇವಿ! ನನಗೊಂದು ಮಾರ್ಗವನ್ನು ತೋರಿಸು. ನನ್ನ ನಾಥನ ಮನಸ್ಸನ್ನು ಸ್ಥಿಮಿತಗೊಳಿಸು. ರಾಮನಾ ಯಕನ ಪ್ರಾಣವನ್ನು ರಕ್ಷಿಸು. ಸುಶೀಲೆಯಾದ ಲಾವಣ್ಯವತಿಯ ಮಾನವನ್ನು ಕಾಪಾಡು." ಈ ರೀತಿಯಾಗಿ ನಿಮೀಲಿತ ನೇತ್ರಳಾಗಿ ರಂಗನಾಯಕಿಯು ಕೆಲವುಹೊತ್ತು ದೇವಿಯನ್ನು ಧ್ಯಾನಮಾಡಿದಳು. ಏನೇನೋ ಯೋಚಿಸಿದಳು. ಕಣ್ತೆರೆದಳು. "ಹಿಂದೂ ಮುಂದೂ ನೋಡಿದರೆ ಪ್ರಯೋಜನವಿಲ್ಲ. ಆಲಸ್ಯದಿಂದ ನಾನು ಮಾಡುವ ತ್ಯಾಗವೆಲ್ಲವೂ ವ್ಯರ್ಥವಾದೀತು" ಎನ್ನುತ್ತಾ ನಿಜನಾಥನಿಗೆ ಒಂದು ಪತ್ರವನ್ನು ಬರೆದಳು. ಆ ಪತ್ರವನ್ನು ಬರೆಯುವಾಗ್ಯೆ ಆಕೆಯ ಮುಖವು ಗಂಭೀರಭಾವವನ್ನು ವಹಿಸಿತ್ತು. ಪತ್ರವನ್ನು ಮುಗಿಸಿ ಭಟನ ನ್ನು ಕರೆದು ಅದನ್ನು ಅವನ ಕೈಯ್ಯಲ್ಲಿಟ್ಟು "ಎಲೋ ಸೇವಕನೇ! ನಿಮ್ಮ ಒಡೆಯನಿಗೆ ನೀನೀಪತ್ರವನ್ನು ಕೊಡು ಮತ್ತೂ ಅದರೊಡನೆ.... ಅಂಜದೆ........ ಅನುಮಾನಿಸದೆ........ ನನಗೆ ಬದಲು ಹೇಳದೆ........ ನನ್ನ ಆಜ್ಞೆಯನ್ನು ಧಿಕ್ಕರಿಸದೆ........ನನ್ನ... ....ನನ್ನ ಶಿರವನ್ನು ಸಹಾ ಕೊಂಡೊಯ್ಯಬೇಕು. ಸರ್ವಥಾ ಮೀರಬಾರದು." ಎಂದು ಹೇಳಿ

ದಳು. ಭೃತ್ಯನು ಭಯಕಂಪಿತಗಾತ್ರನಾದನು. ಬದಲು ಮಾತನಾಡಲು ಶಕ್ತಿ ಇಲ್ಲದೇ ಹೋಯಿತು. ಕುಸುಮಕೋಮಲಿಯಾದ ರಂಗನಾಯಕಿಯ ರೂಪವು ಅತಿ ಭಯಂಕರವಾಗಿತ್ತು. ಆಕೆಯ ಮೋರೆಯು ಕೆಂಪಾಯಿತು. ಕಣ್ಣುಗಳಲ್ಲಿ ಕಿಡಿಗಳು ಬೀಳುತ್ತಿದ್ದವು. ದುಷ್ಟದಾನವರನ್ನು ಸಂಹರಿಸುವ ಸಮಯದ ದೇವಿಯಂತೆ ರೌದ್ರರಸವನ್ನು ಕಕ್ಕುತ್ತಿದ್ದಳು. ತನ್ನೆದುರಿನಲ್ಲಿದ್ದ ದೇವೀ ವಿಗ್ರಹದ ಕೈಯ್ಯಲ್ಲಿನ ಖಡ್ಗವನ್ನು ಥಟ್ಟನೆ ತೆಗೆದುಕೊಂಡು " ಜಯ್ ಶಂಕರೀ ' ಎಂದಳು. ಮರುಕ್ಷಣವೇ ಆ ವೀರ ನಾರೀಮಣಿಯ ಶಿರವು ಮುಂಡದಿಂದ ಬೇರಾಗಿ ನೆಲಕ್ಕೆಬಿದ್ದಿತು. ಅಂತಃಪುರದ ಜನರೆಲ್ಲರೂ ಭೀತಿಯಿಂದ ಚೈತನ್ಯಹೀನರಾಗಿ ನಿಂತರು ಭೃತ್ಯನಿಗೆ ಯೋಚನೆಹರಿಯದೆ ಹೋಯಿತು. ಶಿರವನ್ನು ತೆಗೆದುಕೊಂಡು ಭೀಮನಾಯಕನ ಬಳಿಗೆ ಹೋದನು. ನಾಯಕಿಯು ಏನುತ್ತರವನ್ನು ಕೊಡುವಳೋ, ಆಕೆಯ ಪಾತಿವ್ರತ್ಯವೆಂಥಾದ್ದೋ, ತನ್ನ ಮೇಲಿನ ಪ್ರೇಮವು ಎಷ್ಟುಮಾತ್ರ ನಿಜವಾದದ್ದೋ ಎಂದು ಭೀಮನಾಯಕನು ಎದುರು ನೋಡುತ್ತಿದ್ದನು. ಮತ್ತು ತನ್ನಲ್ಲಿತಾನು ಈ ರೀತಿ ಅಂದು ಕೊಳ್ಳುತ್ತಿದ್ದನು. " ನನಗೆ ಎಂಥಾ ಸಂಧಿಗ್ಧವು ಬಂದೊದಗಿತು. ಸ್ನೇಹವನ್ನೂ, ಬಾಂಧವ್ಯವನ್ನೂ, ಕದನವನ್ನೂ ಸರೀಕರಲ್ಲಿ ಮಾಡಬೇಕೆಂಬ ಹಿರಿಯರ ವಚನವನ್ನು ಒಯ್ಯಾಳಿಸಿದ ಫಲವೋ! ಏನೋ ಎಂಬಂತೆ ನನಗೆ ನಿಷ್ಕಾರಣ ಈ ಸಂಕಟವು ಒದಗಿತು. ರಂಗನಾಯಕಿಯು, ಬಲವಂತನೂ ಚಿತ್ರದುರ್ಗವ ಕೋಟೆಗೆ ಅಧಿಕಾರಿಯೂ ಆದ ಜಟಂಗರಾಜನ ಮಗಳು. ನಾನಾದರೋ ಅಂಥಾ ರಾಜನ ಕೈಕೆಳಗಿನ ಮಂತ್ರಿಯು. ತದೇಕಕುವರಿಯಾದ ಆಕೆಗೆ ತಂದೆತಾಯಿಗಳು ಸತೀತ್ವದ ಸೌಮ್ಯಕ್ಕಿಂತಲೂ ವೀರತ್ವದ ಧರ್ಮವನ್ನೇ ಹೆಚ್ಚು ಕಲಿಸಿರುತ್ತಾರೆ. ಅದನ್ನು ಯೋಚಿಸದೆ ಆಕೆಯನ್ನು ಮದುವೆಯಾದೆನು. ಮನೆಗೆ ಬಂದ ಮಾರನೆಯ ದಿನವೇ. ರಾಮನಾಯಕನ ಮೇಲೆ ಕೈಹಾಕಬೇಕೆಂಬ ಯೋಚನೆಯನ್ನು ಹಿಗ್ಗಿನಿಂದ ಆಕೆಗೆ ಹೇಳಿ ಮತ್ತಿಷ್ಟು ಅಳುಕಾದೆನು. ಕೊನೆಗೆ ಆಕೆಯ ಕೈ ಮೇಲಾಯಿತು. ನಾನು ಆಕೆಯ ಎದುರಿನಲ್ಲಿ ಮಾತನಾಡಲು ಸಹಾ

ಅಂಜಿದೆನು. ನನನ್ನು ಇಷ್ಟರಲ್ಲಿಯೇ ಇಷ್ಟಕ್ಕೆ ತಂದುಕೊಂಡವಳು ನನಗೇನಾದರೂ ಅಪಜಯವಾದರೆ, ಲಕ್ಷಕ್ಕೆ ತರುವಳೇ ? ಅಥವಾ ಮರಣವೇ ಆದರೆ ಪತಿಯೇ ಗತಿಯೆಂದು ಸಹಗಮನ ಮಾಡುವಳೇ ?ಎಂಬ ಸಂಶಯ ಬಂದು ಬಿತ್ತು. ಯುದ್ಧದಿಂದ ಹಿಮ್ಮುಖನಾದರೆ ಅಮೋಘವಾದ ಸ್ವಾಮಿದ್ರೋಹ ಮಾಡಿದಂತಾಗುವುದು. ಏನುಮಾಡಲಿ ? ” ಎಂದು ಯೋಚಿಸುತ್ತಿರಲು ಭಟನು ಸಮೀಪಿಸಿದ್ದನ್ನು ನೋಡಿದನು.. ಅತ್ಯಾತುರದಿಂದ ಅವನನ್ನು ಕುರಿತು, ನನ್ನ ಅರಸಿಯ ವಾಕ್ಯಗಳನ್ನು ತಿಳುಹಿಸಬೇಕೆಂದು ಕೇಳಲು ಅವನು “ಪ್ರಭುಗಳೇ, ಅಮ್ಮನವರು ನಿಮಗೊಂದು ಪತ್ರವನ್ನು ಕಳುಹಿಸಿರುವರು. ಎರಡನೆಯದು. ....

**ಭೀಮನಾಯಕ**:— ಅದೇನು ? ಆ ಎರಡನೆಯದು.

**ಭಟ**;—ಅದು ಅಮ್ಮನವರ ಶಿರವು.

ಭೀಮನಾಯಕನು ಆ ಶಿರವನ್ನು ನೋಡಿದನು. ಅದರ ಅರ್ಥವು ಸಂಪೂರ್ಣವಾಗಿ ಗೋಚರಿಸದೆ ಹೋಯಿತು. ಪತ್ರವನ್ನು ಈ ರೀತಿ ಪಠಿಸಿದನು.

**ಪ್ರಾಣಪತೀ !**

ನನಗೋಸುಗ ನಿಮಗೆ ಮನಶ್ಯಾಂತಿಯಿಲ್ಲದೆ ಚಂಚಲ ಸ್ವಭಾವವುಳ್ಳವರಾಗಿ, ಸ್ವಾಮಿಕಾರ್ಯಕ್ಕೆ ವಿಮುಖರಾಗುವುದನ್ನು ನೋಡಿ ಅನ್ಯಥಾ ಮಾರ್ಗವಿಲ್ಲದೇ ಹೋದುದರಿಂದ, ಶ್ರೀ ಶಂಕರಿಯ ಹರಿತವಾದ ಕತ್ತಿಯಿಂದ ನನ್ನ ಶಿರವನ್ನು ತರಿದು ನಿಮಗೆ ಕಳುಹಿಸಿಕೊಡುತ್ತಾ ಇದ್ದೇನೆ. ಇನ್ನಾದರೂ ನೀವು ತುಚ್ಛನುಖಾಪೇಕ್ಷೆಯನ್ನು ಬಿಟ್ಟು, ನಿಮ್ಮ ಅನುಮಾನಗಳನ್ನೆಲ್ಲಾ ಕಟ್ಟಿಟ್ಟು, ರಣರಂಗದಲ್ಲಿ ಪಿಜೃಂಭಿಸಿ ವಿಜಯಲಕ್ಷ್ಮಿಯನ್ನು ಕೂಡಿರಿ ಇಲ್ಲವೇ ವೀರಸ್ವರ್ಗವನ್ನು ಸೂರೆಗೊಳ್ಳಿರಿ. ಇದುವರೆಗೆ ನೀವು ಬಹಳ ಆಲಸ್ಯವನ್ನು ಮಾಡಿರುವಿರಿ ನಿಮ್ಮನ್ನು ನಂಬಿ ಸೈನ್ಯಹೀನನಾಗಿ ರಾಮನಾಯಕನು ಸಿಡುಗಲ್ಲಿಗೆ ಪ್ರಯಾಣಮಾಡಿರುತ್ತಾನೆ. ನೀವು ಸಕಾಲಕ್ಕೆ ಪಾವಗಡವನ್ನು ಸೇರಿ, ನರಸನಾಯಕನ ಹಾದಿಯನ್ನು ಕಟ್ಟದಿದ್ದರೆ, ಪ್ರಭುವನ್ನೂ,

ಬಂಧುವನ್ನೂ, ಮಿತ್ರನನ್ನೂ, ತಮ್ಮ ಪಾಲಿನ ಇಹಲೋಕದ ದೈವವನ್ನೂ ಅನ್ಯಾಯವಾಗಿ ಮೋಸಗೊಳಿಸಿ ಕುತ್ತಿಗೆ ಕೊಯ್ದಂತಾಗುವುದು.

ಮತ್ತೊಂದು ವಿಷಯವಿದೆ. ವಂಚಕನಾದ ನರಸನಾಯಕನು ಮತ್ತೊಮ್ಮೆ ತಮ್ಮ ಮನಸ್ಸನ್ನು ಪರೀಕ್ಷಿಸಬಹುದು. ರಾಜ್ಯದಾಸೆಯನ್ನು ನಿಮಗೆ ತೋರಿಸಬಹುದು. ನನ್ನಾಣೆ, ನಿಮ್ಮಾಣೆ, ಶ್ರೀ ಶಂಕರಿಯ ಪಾದದಾಣೆ, ಅಂಥಾ ದುರಾಶೆಗೆ ಒಳಗಾಗಿ ಸ್ವಾಮಿದ್ರೋಹಿಯಾಗಿ ಜನ್ಮಜನ್ಮಾಂತರ ಅದರ ಫಲವನ್ನು ಅನುಭವಿಸಬೇಡಿರಿ. ನಾಥಾ! ನಿಮಗೆ ನಾನು ಹೇಳುವಷ್ಟು ಶಕ್ತಳಲ್ಲ. ಆದರೂ ಅಂತ್ಯಕಾಲದ ಸಮಾಧಾನಕ್ಕಾಗಿ ನಿಮಗೆ ಈ ಬುದ್ಧಿವಾದವನ್ನು ಬಿನ್ನಹಮಾಡುತ್ತಿದ್ದೇನೆ. ಧರ್ಮವೂ ಸತ್ಕೀರ್ತಿಯೂ ಶಾಶ್ವತವಲ್ಲದೆ ಈ ರಾಜ್ಯಗೀಜ್ಯಗಳೆಲ್ಲವೂ ಸಟೆ ನೀರಿನಮೇಲಿನ ಗುಳ್ಳೆಯಂತಿರುವ ಈ ಪ್ರಾಣವನ್ನು ನಂಬಿ ಪಾಪಕಾರ್ಯಗಳನ್ನು ಮಾಡಿ ಪಡುವ ಸುಖವು ಕಿಂಚಿತ್ತಾದರೂ ಇಲ್ಲ. ಈ ನನ್ನ ಬಿನ್ನಹವನ್ನು ಮನ್ನಿಸಿ ನೀಚಬುದ್ಧಿಗೆ ಅವಕಾಶವನ್ನು ಕೊಡದೆ ಸ್ವಾಮಿಗೋಸುಗ ಕಾದಲು ತಕ್ಷಣವೇ ಹೊರಡಬೇಕು. ನಿಮಿಷ ನಿಧಾನಮಾಡಿದರೆ ನಿಮ್ಮ ಸತ್ಯದೀಕ್ಷೆಯು ನಿಷ್ಫಲವಾಗಬಹುದು. ತಡಮಾಡಬೇಡಿರಿ. ಬೇಗನೇ ಹೊರಡಿರಿ.

ಅಲ್ಪ ವಿಷಯವು ಮತ್ತೊಂದುಂಟು. ಅದೇನಂದರೆ ತಮ್ಮ ಕಷ್ಟಸುಖಗಳಿಗೆ ಸಹಭಾಗಿನಿಯಾಗಿ ತಮಗೆ ಭೋಗಪ್ರದಾಯಿನಿಯಾದ ನನ್ನ ಈ ಮರಣವು ಅಕಾಲಮರಣವೆಂದು ತಾವು ಸಂಕಟದಿಂದ ಕಾರ್ಯವಿಮುಖರಾಗಬೇಡಿರಿ. ನನ್ನ ಮರಣವು ಸಕಾಲವಾಗಿರುವುದಾಗಲಿ, ಅಕಾಲವೆಷ್ಟುಮಾತ್ರಕ್ಕೂ ಅಲ್ಲ. ಕ್ಷತ್ರಿಯ ವಂಶಜರಾದ ತಮ್ಮ ಮನಸ್ಸು ಯುದ್ಧಸಮಯದಲ್ಲಿ ಕಿಂಚಿತ್ತಾದರೂ ಅಳುಕಬಾರದು. ಪ್ರಸ್ತುತ ನಿಮ್ಮ ಮನಸ್ಸಾದರೋ! ನಾಯಕನಿಲ್ಲದ ನಾವೆಯಂತೆ ಕಟ್ಟಿಲ್ಲದೆ ತಿರುಗಹತ್ತಿದೆ. ನಿಮ್ಮ ಮನೋರಾಜ್ಯದಮೇಲೆ ನಿಮಗೆ ಅಧಿಕಾರವು ತಪ್ಪಿದೆ. ಈ ಅಮಂಗಲವನ್ನು ಹೋಗಲಾಡಿಸಲು ಶಾಂತಿಗಾಗಿ ನನ್ನ ಶಿರವನ್ನು ಪರಮಾನಂದದಿಂದ ದೇವಿಗೆ ಬಲಿ ಕೊಟ್ಟಿರುವೆನು.

ನಾಥಾ! ತಾವು ಅಂತಃಪುರವನ್ನು ಬಿಟ್ಟು ಹೋದಕ್ಷಣವೇ ನಾನು ನಾರುಸೀರೆಯನ್ನುಟ್ಟು, ದೇವಿಯ ಆರಾಧನೆಯಲ್ಲಿ ಮಗ್ನಳಾಗಿದ್ದೆನು. ನಿಮಗೆ ಜಯವನ್ನು ದಯಪಾಲಿಸೆಂದು ಗಿರಿಜೆಯನ್ನು ಪ್ರಾರ್ಥಿಸುತ್ತಿದ್ದೆನು. ನಿಮ್ಮ ಮನಸ್ಸು ಸ್ಥಿಮಿತವಾಗಲೆಂದು ಚಾಮುಂಡಿಯನ್ನು ಬೇಡುತ್ತಿದ್ದೆನು. ನಿಮ್ಮ ಪುನರಾಗಮನವು ತ್ವರಿತವಾಗಲೆಂದು ತಾಯಿಯನ್ನು ಕೇಳಿಕೊಳ್ಳುತ್ತಿದ್ದೆನು. ತಮ್ಮೊಡನೆ ಸುಖಿಸುವ ದಿನಗಳು ಸಮೀಪ ಬರಲೆಂದು ನಿಟ್ಟುಸಿರು ಬಿಡುತ್ತಿದ್ದೆನು. ಆ ಸಮಯದಲ್ಲಿ ದೂತನು ನಿಮ್ಮ ಪತ್ರವನ್ನು ತಂದುಕೊಟ್ಟನು. ಅದನ್ನು ನೋಡಿ ನನಗೆ ಒಂದು ವಿಧದ ಆವೇಶಹುಟ್ಟಿದಂತಾಯಿತು. ದೇವಿಯೇ ನನ್ನನ್ನು ಈ ಕಾರ್ಯಕ್ಕೆ ಪ್ರೇರಣೆ ಮಾಡಿದಂತಾಯಿತು. ನನ್ನ ಈ ಕಾರ್ಯದಿಂದ ನೀವು ವಿಜೃಂಭಿತರಾಗಿ ದ್ವಿಗುಣೀಕೃತವಾದ ಭಕ್ತಿಯಿಂದ ಸ್ವಾಮಿಕಾರ್ಯವನ್ನು ಕೈಗೂಡಿಸಬೇಕು. ನರಸನಾಯಕನನ್ನು ಅಡ್ಡಹಾಕಿ ಶರೀರದಲ್ಲಿ ಪ್ರಾಣವಾಯುವು ಇರುವನಕ ದೃಢಮನಸ್ಕರಾಗಿ ಯುದ್ಧಮಾಡಬೇಕು. ಇಲ್ಲವಾದರೆ ನನ್ನ ಆತ್ಮಕ್ಕೆ ಶಾಂತಿ ಇರಲಾರದು.

ತಮ್ಮ ಪಾದಸೇವಕಳು

**ರಂಗನಾಯಕಿ.**

ಭೀಮನಾಯಕನ ಸಂಕಟವನ್ನು ವರ್ಣಿಸಲು ಸಾಧ್ಯವಲ್ಲ. ತನ್ನ ಅರಸಿಯ ಉತ್ಕೃಷ್ಟ ಪಾತಿವ್ರತ್ಯವೂ, ಅವ್ಯಾಜವಾದ ಪ್ರೇಮವೂ, ಗಂಭೀರ ಭಾವವೂ, ಒಂದೊಂದು ಆತನ ಮನಸ್ಸನ್ನು ಭೇದಿಸುತ್ತಿದ್ದವು. ಆಕೆಯ ಶಿರವನ್ನು ಮುದ್ದಾಡಿದನು. ಹೃದಯಕ್ಕೆ ಔಚಿಕೊಂಡನು. ಎವೆಯಿಕ್ಕದೆ ಕಡೆನಾರಿ ನಿಮೀಲಿತ ನೇತ್ರವಾದ ಆ ಮುಖಪದ್ಮವನ್ನು ಮನಸಾರ ನೋಡಿದನು, ಕಣ್ಣೀರಿಟ್ಟನು. ದುಃಖವು ನಿರ್ಭರವಾಯಿತು. "ಅಯ್ಯೋ! ವೀರಸತೀಮಣಿ, ನಿನ್ನನ್ನು ಸ್ವಾಪರಾಧದಿಂದ ಹೋಗಲಾಡಿಕೊಂಡ ನನ್ನ ಮತಿಗೇಡಿತನವನ್ನು ಎಷ್ಟೆಂದು ಹೇಳಲಿ! ನನ್ನ ದುರ್ದೈವವನ್ನು ಎಷ್ಟೆಂದು ದೂರಲಿ? ನಿನ್ನ ವಿಯೋಗವನ್ನೆಂತು ತಾಳಲಿ? ನಿನ್ನನ್ನು ಯಾವ ವಿಧದಿಂದ ಮರೆ

ಯಲಿ? ಗರ್ಭನಿರ್ಭಾಗ್ಯನಿಗೆ ರತ್ನದ ರಾಶಿಯು ಸಿಕ್ಕಿದಂತೆ ನನಗೆ ನೀನು ಸಿಕ್ಕಿದ್ದೆ. ರೂಪದಲ್ಲಿ ರತಿ, ಬುದ್ಧಿಯಲ್ಲಿ ಸರಸ್ವತಿ" ಪೌರುಷ ದಲ್ಲಿ ವೀರಾಧಿವೀರರನ್ನು ತಲೆಬಾಗಿಸುವಂತಿದ್ದೆ. ನೀನು ಹೋದಮೇಲೆ ನನಗೆ ಇನ್ನೆಲ್ಲಿಯ ಸೌಖ್ಯ. ಎತ್ತಣ ಶಾಂತಿ. ಪ್ರಾಣದಾಸೆ ತಾನೆ ಇನ್ನೇನಿದೆ? ನನ್ನ ಬಾಳ್ವೆಯು ಈ ರೀತಿ ಆಗುವದೆಂದು ತಿಳಿಯಲಿಲ್ಲ. ನೀನಾದರೋ ಭಾವಗರ್ಭಿತವಾಗಿ ಮಾತನಾಡುತ್ತಾ ಬಂದೆ. ಆತುರ ಪಟ್ಟು ಆತ್ಮಹತ್ಯವನ್ನೇ ಮಾಡಿಕೊಂಡು ಬಿಟ್ಟೆ. ಸ್ವಲ್ಪ ಸಮಾಧಾನ ತಂದುಕೊಂಡು, ನಿನ್ನ ಮನೋನೈರ್ಮಲ್ಯವನ್ನು ಒಂದಾವರ್ತಿ ವಿಶದ ವಾಗಿ ತಿಳುಹಿಸಿದ್ದರೆ, ಇಂಥಾ ಅನಾಹುತವು ಆಗುತ್ತಿರಲಿಲ್ಲ. ನನ್ನ ದುರ್ದೈವವು ಇಷ್ಟುಯಿರಲು ನಿನ್ನನ್ನೇಕೆ ದೂರಬೇಕು. ಕೇಡು ಗಾಲ ನನಗೆ ಸಮೀಪಿಸಿತು. ಅದರಿಂದಲೇ ದುರಾಲೋಚನೆಯು ನನ್ನ ತಲೆಯಲ್ಲಿ ಹೊಕ್ಕಿತು. ನನ್ನ ಸುಕೃತವು ಸವೆದುಹೋದದ್ದರಿಂದ ನಿನ್ನಲ್ಲಿ ನಿಷ್ಕಾರಣವಾದ ಅನುಮಾನವು ಹುಟ್ಟಿತು. ನನ್ನ ಆನಂದವು ಈ ಅವಸಿಯಲ್ಲಿ ಮುಗಿಯಿತು. ಅದರಿಂದಲೇ ನೀನು ಹಿಂದೂ ಮುಂದೂ ನೋಡದೆ, ಒಂದಾವರ್ತಿಯಾದರೂ ನನಗೆ ಎಚ್ಚರಿಕೆ ಕೂಡದೆ ಇಂಥಾ ಕಾರ್ಯವನ್ನು ಮಾಡಿಬಿಟ್ಟೆ. ನಾನೆಷ್ಟು ಹಂಬಲಿಸಿ-ದರೂ ಫಲವಿಲ್ಲ. ನನಗೆ ನೀನಿಲ್ಲದ ಈ ಹಾಳು ಪ್ರಪಂಚವು ಬೇಕಿಲ್ಲ. ನಿನ್ನ ಚರಮವಾಂಛಿತವನ್ನು ತೀರಿಸಲು ಈಗಲೇ ಹೊರಡುವೆನು. ಸ್ವಾಮಿಸೇವೆಯನ್ನುಮಾಡಿ, ನಾನು ಧನ್ಯನಾಗುವೆನು. ನಿನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡುವೆನು " ಎಂದು ನಿರ್ಧರಿಸಿಕೊಂಡನು.

ಸೈನಿಕರಿಗೆ ಪ್ರಯಾಣಕ್ಕೆ ಅಪ್ಪಣೆಯನ್ನು ಕೊಟ್ಟನು. ಪಾವಗಡವು ಮೂರುಗಾವುದವಿತ್ತು. ಮಾರನೆಯದಿನ ಸೂರ್ಯೋದಯಕ್ಕೆ ಮುಂಚೆಯೇ ಅಲ್ಲಿಗೆ ಸೇರಬೇಕಾಗಿತ್ತು. ದಂಡೆಲ್ಲವೂ "ಜಯ ಕಾಳಿ, ಜಯ ದುರ್ಗೀ, ಜಯಮಹಾದೇವಿ" ಎಂದು ಜಯಧ್ವಾನಗಳನ್ನು ಮಾಡುತ್ತ, ತೀಕ್ಷ್ಣವಾದ ಸೂರ್ಯಾತಪವನ್ನು ಗಣಿಸದೆ ಮುಂದುವರಿದು ಹೋಗುತ್ತಿತ್ತು, ಭೀಮನಾಯಕನು ಮನೋಚಾಂಚಲ್ಯವನ್ನೆಲ್ಲವನ್ನು ಅಣಗಿಸಿಕೊಂಡು ಅವರೊಡನೆ ಪ್ರಯಾಣ ಮಾಡಿದನು.

## ೫ನೆಯ ಪ್ರಕರಣ.

ಮಾನವರಂತೆಯೇ ಸ್ಥಾನಗಳುಕೂಡ ಕರ್ಮಫಲಕ್ಕೆ ಕಟ್ಟುಬಿದ್ದಿರುವವೆಂಬುವುದರಲ್ಲಿ ಸಂಶಯವಿಲ್ಲ. ಹುಲಿಕರಡಿಗಳಿಗೆ ಆಲಯವಾಗಿದ್ದ ನಿಡುಗಲ್ಲು ಗುಡ್ಡವು ಪಾಳೆಯಗಾರರ ದೇಹದಾರಢ್ಯ, ಮನೋಬಲ, ಬುದ್ಧಿಕುಶಲತೆಗಳಿಂದ ನೇತ್ರರಂಜಕವಾದ ಕೋಟೆಯಾಯಿತು ಕಾಡುಹಂದಿಗಳು ಕಾದಾಡುತ್ತಿದ್ದ ಗಿರಿಯ ಗುಹೆಗಳು, ಯುವಕರ ಗರಡಿಯಮನೆಗಳಾದುವು. ತರುಲತೆಗಳಿಂದಾವರಿಸಲ್ಪಟ್ಟು ದುರ್ಗಮವಾಗಿದ್ದ ಸ್ಥಳದಲ್ಲಿಯೇ ಮಹಾಕಾಳಿಯ ಆಲಯವು ನಿರ್ಮಿತವಾಯಿತು. ಮಾನವರಿಗೆ ಏರಲಸಾಧ್ಯವಾಗಿದ್ದ ಬೆಟ್ಟದ ತುದಿಯಲ್ಲಿ ಸಿಖರದ ಬಸವೇಶ್ವರನ ದೇವಾಲಯವು ಕಣ್ಣಿಗೆ ಆನಂದದಾಯಕವಾಯಿತು. ಕರ್ಮಫಲವಲ್ಲದಿದ್ದರೆ, ಅಂಥಾ ಕೋಟೆಯು ಮೂರು ದಿನಗಳಲ್ಲಿ ನರಸನಾಯಕನ ಸೈನ್ಯದ ಹೊಡತದಿಂದ ನಿರ್ಮಾನುಷ್ಯವಾಗುತ್ತಿರಲಿಲ್ಲ. ಸಂಗನಾಯಕನ ಮರಣಾನಂತರ ಆ ಕೋಟೆಯ ಶಿಥಿಲಭವನಗಳನ್ನು ನೋಡಿದವರಾರೂ, ಅದು ಮತ್ತೊಮ್ಮೆ ಶ್ರೀ ಸಂಶೋಭಿತವಾಗುವದೆಂದು ತಿಳಿದಿರಲಿಲ್ಲ. ಆದರೆ, ಕರ್ಮದ ಪ್ರಾಬಲ್ಯವು ಬೇರೆಯಿತ್ತು.

ಆ ಶಿಥಿಲ ಭವನಗಳೇ ಈ ದಿನ ನೋಟಕರ ಮನವನ್ನು ಆಕರ್ಷಿಸುತ್ತಿದ್ದವು. ನಿರ್ಮಾನುಷ್ಯವಾಗಿದ್ದ, ಆ ರಾಜಬೀದಿಗಳೇ ಈ ದಿನ ಜನಸಮುದಾಯದಿಂದ ಗಿಜಿಗಿಜಿಯೆನ್ನುತ್ತಿದ್ದವು. ಭೀಕರ ಮೃಗಾರಾವಕ್ಕೆ ಪ್ರತಿಧ್ವನಿಗೊಡುತ್ತಿದ್ದ ಸ್ಥಳದಲ್ಲಿ ಈ ದಿನ ಮಧುರಗಾನವೂ, ಭೇರೀ ಕಹಳೆಗಳ ಸುನಾದವೂ, ಕರ್ಣರಂಜಕವಾಗಿದ್ದಿತು. ಬಸಪ್ಪನಾಯಕನ ಪ್ರೋತ್ಸಾಹದಿಂದ ನಿಡಗಲ್ಲು ಪ್ರಜಾಜನರು ತಂಡ ತಂಡವಾಗಿ ಕೋಟೆಗೆ ಬರುತ್ತಿದ್ದರು. ನರಸನಾಯಕನ ಹೊಡತದಿಂದ ಭೀತರಾಗಿ, ಗಿರಿಗುಹೆಗಳನ್ನು, ಹಳ್ಳಿಗ್ರಾಮಗಳನ್ನು ಸೇರಿಕೊಂಡು ಪ್ರಾಣರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದ ಜನಾಂಗವೆಲ್ಲವೂ ಕೋಟೆಯಲ್ಲಿಯ ವಿಜಯಧ್ವನಿಯನ್ನೂ, ರಾಜಕುವರಿಯ ವಿವಾಹದ ಸುವಾರ್ತೆಯನ್ನೂ ಕೇಳಿ, ಆವೇಶಪೂರಿತರಾಗಿ ಬರುತ್ತಿದ್ದರು.

ಮಗಳ ಮನೋಬಲಕ್ಕೂ, ದೃಢನಿಶ್ಚಯಕ್ಕೂ, ವೀರವ್ರತಕ್ಕೂ ಆನಂದವನ್ನು ಹೊಂದಿ ಬಸಪ್ಪನಾಯಕನು ತನ್ನ ಕೋಟೆಗೆ ಹೋಗಿ, ರಾಮನಾಯಕನ ಪತ್ರವನ್ನು ನಿರೀಕ್ಷಿಸುತ್ತಾ, ತನ್ನ ಸೈನ್ಯವನ್ನು ಕೂಡಿಸಿಕೊಳ್ಳುತ್ತಿದ್ದನು ರಾಮನಾಯಕನ ಅಂತರಂಗವು ಅಂತಃಕರುಣಯುತವೆಂದು ಆತಗೆ ಗೊತ್ತಿದ್ದಿತು. ದಿಕ್ಕಿಲ್ಲದ ಪಕ್ಷಿಯಾದ ಲಾವಣ್ಯಾವತಿಯನ್ನು ರಕ್ಷಿಸುವನೆಂಬುವ ನಂಬಿಕೆಯು ತುಂಬಾಯಿತ್ತು.

ಆದರೆ ಲಾವಣ್ಯಾವತಿಯ ಮನಸ್ಸು ಮಾತ್ರ ಹಾರಾಡುತ್ತಲಿತ್ತು. ಒಂದು ಗುಹದ್ವಾರದಲ್ಲಿ ಕುಳಿತು ಆ ತರುಣಿಯು ಈ ರೀತಿ ಯೋಚಿಸುತ್ತಿದ್ದಳು. " ಬಿದಿಗೆಯಾದರೋ ಸಮಿಾಪಿಸಿತು. ರತ್ನಗಿರಿಗೆ ಹೋದ ಭಟನ ಸುಳುವೇಯಿಲ್ಲ. ಸುರಕ್ಷಿತವಾಗಿ ಆ ಪಟ್ಟಣವನ್ನು ಸೇರಿದನೋ, ಆಯಾಸದಿಂದ ಮಾರ್ಗಮಧ್ಯದಲ್ಲಿಯೇ ನಿಂತು ಹೋದನೋ ? ಅಲ್ಲಿಗೆ ಸೇರಿದ್ದರೂ, ಪ್ರಭುವಿನ ಭೆಟ್ಟಿಯಾಯಿತೋ ಆಗಲಿಲ್ಲವೋ ? ಅರಸನು ಈ ನನ್ನ ಬಿನ್ನಹವನ್ನು ಕೇಳಿ ಕುರುಣಿಸಿದನೋ, ಅಥವಾ “ದಾರಿಯಲ್ಲಿ ಹೋಗುವ ಮಾರಿಯನ್ನು ಮನೆಹೊಕ್ಕು ಹೋಗು” ಎಂಬಂತೆ ಈ ಕಾರ್ಯದಲ್ಲಿ ಕಾಲಿಟ್ಟು, ಬಲವಂತನಾದ ನರಸನಾಯಕನೊಡನೆ ವೃಥಾಕಲಹವು ನನಗೇತಕ್ಕೆಂದು ಸುಮ್ಮನಾದನೋ ? ನನ್ನ ಮೋಹಕ್ಕೆ ಮೆಚ್ಚಿ ತನ್ನ ಪ್ರೇಮಸಾಮ್ರಾಜ್ಯಕ್ಕೆ ಪಟ್ಟವನ್ನು ಕಟ್ಟಲನುಗ್ರಹಿಸುವನೋ, ಇಲ್ಲವೇ ಮೋರೆಕಾಣದ ನನ್ನನ್ನು ಮೋಹಿಸಿದ ಈ ಹೆಣ್ಣಿನ ಮನವು ಮತ್ತೆ ಯಾವ ಮೇಲಾದರೂ ಹೋಗಬಹುದು. ಇಂಥವಳಿಗೋಸುಗ ಯುದ್ಧಮಾಡುವುದು ಯೇನು ಯೋಚನೆಯೆಂದು ಸುಮ್ಮನಾದನೋ. ಈ ದುಸ್ಥಿಯಲ್ಲಿಯೂ ವಂಶಗೌರವಕ್ಕೆ ತಕ್ಕ ನನ್ನ ಮೇಲೆಯೇ ದೃಷ್ಟಿ ಇಟ್ಟಳೆಂದು ಮೆಚ್ಚಿದನೋ, ಆ ನಿರ್ಭಾಗ್ಯಳು ನನ್ನನ್ನು ವಿವಾಹವಾಗಲು ಇಚ್ಛಿಸಿದಳೆಂದು ಕುಪಿತನಾದನೋ ? ನನ್ನ ಮೇಲೆ ಪ್ರೇಮವೂ, ಅಂತಃಕರುಣವೂ ಇದ್ದು ಸಹಾ, ಬಲವಂತನಾದ ನರಸನಾಯಕನಿಗೆ ಅಂಜಿ ಹಿಂಜರಿದನೋ ? ಏನೊಂದು ತಿಳಿಯದೇ ಹೋಯಿತು.

ರಾಮನಾಯಕನು ಬರುವ ಆಶೆಯು ಸಣ್ಣದಾಯಿತು. ಒಂಟಿಗರಾಗಿ ದೊಡ್ಡಪ್ಪನವರು ನರಸನಾಯಕನ ಎದುರಿಗೆ ಒಂದು ಕ್ಷಣವಾದರೂ ನಿಲ್ಲಲಾರರು. ನಾಯಕನಿಲ್ಲದ ನನ್ನ ಪ್ರಜೆಯು ಹಿಂದಿನ ಸೋಲನ್ನು ನೆನೆದು ನಿರುತ್ಸಾಹಿಗಳಾಗಿ ಕಾಲಿಗೆ ಬುದ್ಧಿಹೇಳುವರಾಗಲಿ ನನ್ನನ್ನು ಕಾಪಾಡಲಾರರು. ನರಸನಾಯಕನು ಕನಿಕರವಿಲ್ಲದ ಕಟುಕನು. ರಾಮನಾಯಕನಿಗೆ ಅರ್ಪಿತವಾದ ನನ್ನ ಮನಸ್ಸಿಗೆ ಹೀನ ಕುಲಜನಾದ ಅವನ ಹೆಸರೇ ಅಸಹ್ಯವಾಗಿದೆ.

ಹಾ ! ದೇವೀ ! ಜಗದಂಬೆ ! ಈ ನಿನ್ನ ಭಕ್ತಳನ್ನು ಏನು ಮಾಡಲೆಣಿಸಿದೆ ? ನರಸನಾಯಕನು ನೆನಪಿಗೆ ಬಂದಾಗಲೆಲ್ಲ ಶರೀರವು ಕಂಪಿಸುವುದು. ನೀನೇ ನನ್ನನ್ನು ಕಾಯಬೇಕು. ದುಷ್ಟರಾಕ್ಷಸರನ್ನು ಚೆಂಡಾಡಿ ಕೋಟ್ಯಾನುಕೋಟಿ ದೇವತೆಗಳನ್ನು ಕಾಯ್ದ ಜಗನ್ಮಾತೆಗೆ ಓರ್ವ ತುಚ್ಛಮಾನವನ ಕೈಗೆ ಸಿಕ್ಕಿರುವ ಈ ಒಬ್ಬ ಮಗಳನ್ನು ಕಾಯುವದು ಏನು ದೊಡ್ಡ ಕಲಸ ! ತಾಯೀ ! ಶಂಕರೀ ! ಭಕ್ತಳನ್ನು ಕೈ ಬಿಡಬೇಡ. ”

ಸೈನಿಕರ ಕೋಲಾಹಲವು ಆಕೆಯ ಯೋಚನೆಗೆ ಅಂತರಾಯವಾಯಿತು. ಬೆದರಿದ ಜಿಗರಿಯಂತೆ ಆಕೆಯು ಕಿವಿಗೊಟ್ಟು ಕೇಳಿದಳು. ನಿಸ್ಸಂಶಯವಾಗಿಯೂ ಅದು ಸೈನಿಕರ ಕೋಲಾಹಲವೇ ಎಂದು ತಿಳಿದಳು. ಆದರೆ ಸಕಾಲ ಮಿತ್ರನಾಗಿ ಬರುತ್ತಿರುವ ರಾಮನಾಯಕನ ಸೈನ್ಯವೋ ಹಾಗಲ್ಲದೇ, ಅಕಾಲಮೃತ್ಯುವಿನಂತೆ ಬರುತ್ತಿದ್ದ ನರಸನಾಯಕನ ಸೈನ್ಯವೋ ಎಂಬ ಸಂಶಯವು ಹುಟ್ಟಿತು ರತ್ನಗಿರಿಯ ಮಾರ್ಗದಕಡೆ ಕಿವಿಗೊಟ್ಟು ಕೇಳಿದಳು ಆ ದಿಕ್ಕಿನ ಶಬ್ದವಾಗಿರಲಿಲ್ಲ. ಪೆನುಗೊಂಡೆಯಕಡೆ ಆಲಿಸಿದಳು. ಧ್ವನಿಯು ಪೂರ್ವದಿಕ್ಕಿನದೆಂಬುವದರಲ್ಲಿ ಸಂಶಯ ಕಾಣಲಿಲ್ಲ. ಲಾವಣ್ಯವತಿಯು ಗದಗದನೆ ನಡುಗಿದಳು. ಮೈ ಬೆವರಿತು. ಬಾಯಿ ಒಣಗಿತು. ಮಾತನಾಡಲು ಸಹ ಚೈತನ್ಯವಿಲ್ಲದೇ ಹೋಯಿತು. ಆಕೆಯ ಆಶೆಯೆಲ್ಲವೂ ನಿರಾಶೆಯಾಯಿತು. ಪತಿತನಾದ ನರಸನಾಯಕನ ಕೈಗೆ

ಬೀಳುವದಕ್ಕೆ ಮುಂಚಿತವಾಗಿ ಪ್ರಾಣಹತ್ಯ ಮಾಡಿಕೊಳ್ಳಲೆಣಿಸಿದಳು. ಆದಕ್ಕೆ ಕೈಕಾಲುಗಳು ಆಡದೇ ಹೋದವು.

ಪ್ರಿಯವಾಚಕರೇ ! ಪೆನುಗೊಂಡೆಯ ಕೋಟೆಯು ಸಿಡಗಲ್ಲಿಗೆ ಪೂರ್ವದಿಕ್ಕಿನಲ್ಲಿದೆ. ನರಸನಾಯಕನ ಸೈನ್ಯವು ಆ ದಿಕ್ಕಿನಿಂದಲೇ ಬರಬೇಕಾದದ್ದು. ಆ ದಿಕ್ಕಿನಿಂದಲೇ ಲಾವಣ್ಯವತಿಗೆ ಸೈನ್ಯದ ಕೋಲಾಹಲವು ಕೇಳಿ ಬಂದದ್ದು. ಭೀಮನಾಯಕನ ಅಜಾಗ್ರತೆಯಿಂದ ನರಸನಾಯಕನು ಸಿಡಗಲ್ಲಿಗೆ ಬಂದನೆಂದು ಭಾವಿಸಬೇಡಿರಿ. ಪಶ್ಚಿಮಭಾಗದಿಂದ ಮಗಳ ಪರಿಣಯ ಮಹೋತ್ಸವಕ್ಕಾಗಿ ಬರುತ್ತಿದ್ದ ಬಸಪ್ಪನಾಯಕನ ಸೈನ್ಯದಗದ್ದಲವು, ಪೂರ್ವಭಾಗದ ಬೆಟ್ಟಗುಡ್ಡಗಳಲ್ಲಿ ಪ್ರತಿಧ್ವನಿಗೈದು ಆಕೆಗೆ ಭ್ರಾಂತಿಯನ್ನು ಹುಟ್ಟಿಸಿತ್ತು. ಯಾವ ಶಬ್ದವೇ ಕೇಳಿಬರಲಿ ಲಾವಣ್ಯವತಿಗೆ ಅದು ಹಗೆಯನ ಸೈನ್ಯದ ಗದ್ದಲವಾಗಿ ತೋರುತ್ತಿತ್ತು. ಕ್ಷಣ ಕ್ಷಣವೂ ಪೆನುಗೊಂಡೆಯ ದಾರಿಯ ಕಡೆ ಭೀತಿಯಿಂದ ನೋಡುತ್ತಿದ್ದಳು. ಆ ಕಡೆ ಸೈನ್ಯದ ಸುಳುವು ಕಾಣಬರಲಿಲ್ಲ. ರತ್ನಗಿರಿಯ ಸೈನ್ಯವು ಉತ್ತರ ದಿಕ್ಕಿನಿಂದ ಬರಬೇಕಾಗಿತ್ತು. ಆ ಕಡೆ ಮನುಷ್ಯರು ಬರುವ ಚಿನ್ಹಗಳೇ ಇರಲಿಲ್ಲ. ಅದು ಆರ ಗದ್ದಲವಿರಬಹುದೆಂದು ಆ ಗುಣವತಿಯು ಬೆರಗಾಗಿ ಯೋಚಿಸುತ್ತಿದ್ದಳು ಬಸಪ್ಪನಾಯಕನು ಸೈನ್ಯಯುತನಾಗಿ ಪಶ್ಚಿಮ ದಿಕ್ಕಿನಿಂದ ಬರುತ್ತಿರುವನೆಂದು ಗೆಳತಿಯೊಬ್ಬಳು ಬಂದು ಹೇಳಿದಳು. ಲಾವಣ್ಯವತಿಯು ತನ್ನ ಭೀತಿಯು ನಿಷ್ಕಾರಣವಾದುದೆಂತಲೂ, ತನ್ನ ದೊಡ್ಡಪ್ಪನವರ ಸೈನ್ಯದ ಕೋಲಾಹಲದ ಪ್ರತಿಧ್ವನಿಯೇ ತನ್ನನ್ನು ತಳಮಳಗೊಳಿಸಿತ್ತೆಂತಲೂ ಗ್ರಹಿಸಿ ಸಮಾಧಾನ ಮಾಡಿಕೊಂಡಳು. ಅಷ್ಟರಲ್ಲಿ ಬಸಪ್ಪನಾಯಕನು ಕೋಟೆಯನ್ನು ಹೊಕ್ಕು, ಮಗಳನ್ನು ಆಲಿಂಗನಗೈದು ರಾಮನಾಯಕನು ಕಳುಹಿಸಿಕೊಟ್ಟಿದ್ದ ಅಭಯಪತ್ರವನ್ನು ಆಕೆಯ ಕೈಯಲ್ಲಿ ಇಟ್ಟನು. ರಾಮನಾಯಕನು ಬಿದಿಗೆಯ ಲಗ್ನಕ್ಕೆ ಮದವಣಿಗನಾಗಿ ಬರುವನೆಂದು ಹೇಳಿದನು. ಲಾವಣ್ಯವತಿಯ ಸಂತೋಷವನ್ನು ವರ್ಣಿಸುವದಕ್ಕಿಂತಲೂ ರಸಿಕರು ಊಹಿಸುವುದು

ಲೇಸು. ಆ ಮೋಹನಾಂಗಿಯು ಆ ಪತ್ರವು ತನ್ನ ಮೂರುತಿಂಗಳ ತಪದ ಫಲವೆಂದೆಣಿಸಿ ಅದನ್ನು ಕಣ್ಣಿಗೆ ಒತ್ತಿಕೊಂಡಳು. ಆನಂದಾಶ್ರುಗಳನ್ನು ಸುರಿಸಿದಳು.

**ಲಾವಣ್ಯವತಿ**:—ದೊಡ್ಡಪ್ಪನವರೇ ! ನಿಮ್ಮ ಸೈನ್ಯದ ಧ್ವನಿಯು ಪೂರ್ವದಿಕ್ಕಿನ ಬೆಟ್ಟಗಳಲ್ಲಿ ಪ್ರತಿಧ್ವನಿಮಾಡಲು, ಯವನಪ್ರಾಯನಾದ ನರಸನಾಯಕನು ಬಂದನೆಂದು ನಡುಗಿ ನೀರಾದೆನು. ತಂದೆಯಿಲ್ಲದ ಕೊರತೆಯನ್ನು ತೀರಿಸಿದಿರಿ. ನಿಮ್ಮ ಹೊಟ್ಟೆಯ ಮಗಳಂತೆ ನನ್ನಲ್ಲಿ ಕರುಣವಿಟ್ಟು ನನ್ನನ್ನು ಉದ್ಧರಿಸಲು ಬಂದಿರುವ ತಮ್ಮ ಉಪಕಾರವು ಎಷ್ಟು ಹೊಗಳಿದರೂ ತೀರದು.

**ಬಸಪ್ಪನಾಯಕ**:— ಮಗಳೇ! ನನ್ನನ್ನು ನೀನು ಕೊಂಡಾಡಬೇಕಾದ್ದಿಲ್ಲ ವಂಶಗೌರವವನ್ನು ನಿಲ್ಲಿಸಿ, ನಿನ್ನನ್ನು ಆ ನರಸನಾಯಕನ ಸೆರೆಯಿಂದ ತಪ್ಪಿಸುವದಕ್ಕಲ್ಲದೇ ಹೋದರೆ, ಈ ನನ್ನ ಜನ್ಮವು ಮತ್ತೆ ಯಾತಕ್ಕೆ ಬೇಕು ? ಇನ್ನು ನಾವು ಆಲಸ್ಯ ಮಾಡಲಾಗದು. ನನ್ನ ಸೈನ್ಯವೆಲ್ಲವೂ ಬಂದಿರುವುದು. ಪರಾಜಿತರಾಗಿ, ದಿಕ್ಕು ದಿಕ್ಕಿಗೆ ಪಲಾಯನವಾಗಿದ್ದ ನಿಡುಗಲ್ಲು ಪ್ರಜೆಗಳಿಗೆಲ್ಲರಿಗೂ ನಾನು ವರ್ತಮಾನ ಕಳುಹಿಸಿ ಇದ್ದೆನು. ಅವರೆಲ್ಲರೂ ತಮ್ಮ ತಮ್ಮ ಆಪ್ತರೊಡನೆ ಬಂದಿದ್ದಾರೆ. ಧನ ಧಾನ್ಯಾದಿ ವಸ್ತುಗಳನ್ನು ಸೇಖರಿಸಿದ್ದಾರೆ. ನಿನ್ನ ಪರಿಣಯಕ್ಕೆ ತಕ್ಕ ಕಾರ್ಯಗಳನ್ನು ಯಾರಷ್ಟಕ್ಕೆ ಅವರು ಮಾಡುತ್ತಾ ಇದ್ದಾರೆ. ಅವರೆಲ್ಲರನ್ನೂ ಕಾಳಿಯ ಆಲಯದ ಮುಂದಿನ ಬಯಲಿನಲ್ಲಿ ಈ ದಿನ ಸಾಯಂಕಾಲ ಕೂಡಿಸುತ್ತಿದ್ದೇನೆ. ಪರಿಣಯ ಕಾರ್ಯವನ್ನು ಸಾಂಗವಾಗಿ ನಡೆಯಿಸಬೇಕೆಂತಲೂ, ವಿಧಿ ಇಲ್ಲದೇ ಯುದ್ಧಮಾಡಬೇಕಾಗಿ ಬಂದಲ್ಲಿ ನರಸನಾಯಕನೊಡನೆ ಹೋರಾಡಬೇಕೆಂತಲೂ ಪ್ರೋತ್ಸಾಹಪಡಿಸುತ್ತೇನೆ. ಆ ಸಮಯದಲ್ಲಿ ನೀನುಸಹ ಒಂದೆರಡು ಮಾತುಗಳಾಡಿದರೆ, ತಂದೆಯ ಸಮಾನನಾದ ನಿಮ್ಮಪ್ಪನನ್ನು ನೆನಪಿಗೆ ತಂದುಕೊಂಡು ಅವರು ನಿನಗಾಗಿ ಪ್ರಾಣಗಳನ್ನಾದರೂ ಅರ್ಪಿಸಲುಸಿದ್ಧರಾಗುವರು. ಕಾಲವಿಳಂಬಮಾಡದೆ ದೇವಿಯ ಆಲಯಕ್ಕೆ ಹೋಗೋಣ.

**ಲಾವಣ್ಯವತಿ**:— ಜನಕಾ! ನನಗೆ ಎರಡು ಘಳಿಗೆಯ ವಿರಾಮ ಬೇಕು. ಈ ಜಡೆ, ಈ ಭಸ್ಮ, ಈ ನಾರುಸೀರೆ, ಈ ರುದ್ರಾಕ್ಷ-ಮಾಲೆಗಳು ಇನ್ನು ನನಗೆ ಸಲ್ಲವು. ರಾಮನಾಯಕನ ವಧುವು ಧರಿಸಬೇಕಾದ ವಸ್ತ್ರಾಭರಣಗಳನ್ನು ಧರಿಸಿಕೊಂಡು ಬರುವೆನು.

**ಬಸಪ್ಪನಾಯಕ**:— ಅದೇರೀತಿ ಮಾಡು. ನಿನಗಾಗಿ ಇಲ್ಲಿಯೇ ಕಾದಿರುವೆನು. ನಾವಿಬ್ಬರೂ ಹೋಗಿ ಕಾರ್ಯವನ್ನು ನೆರವೇರಿಸಿಕೊಂಡು ಬರೋಣ.

ತಪಸ್ವಿನೀ ವೇಷಧಾರಿಣಿಯಾಗಿದ್ದ ಲಾವಣ್ಯವತಿಯು ಕಣ್ಮರೆಯಾದಳು. ಕೆಲವುಹೊತ್ತಿನ ಮೇಲೆ ದಿವ್ಯಾಂಬರ ಭೂಷಿತಳಾಗಿ ಆ ನವ-ಮೋಹನಾಂಗಿಯು ತಮ್ಮ ದೊಡ್ಡಪ್ಪನ ಮುಂದೆ ಬಂದು ನಿಂತಳು. ನರಸನಾಯಕನ ಅತ್ಯಾಚಾರವೆಂಬ ದಾವಾನಲದಲ್ಲಿ ಬಾಡಿ ಬತ್ತಿಹೋಗಿದ್ದ ಆ ಸುಕುಮಾರಿಯ ಆಶಾಲತೆಯು ರಾಮನಾಯಕನ ಲೇಖ ಎಂಬ ಅಮೃತಧಾರೆಯಿಂದ ಪುನರುದ್ಧಾರವಾಗಿತ್ತು. ಆ ಕೋಮಲಾಂಗಿಯ ಮುಖಕಮಲದಲ್ಲಿ ನೂತನವಾದ ತೇಜಸ್ಸು ಉದ್ಭವಿಸಿತ್ತು.

ದೊಡ್ಡಪ್ಪನವರೊಡನೆ ಆಕೆಯು ದೇವಿಯ ಆಲಯವನ್ನು ಸೇರುವಷ್ಟಕ್ಕೆ ಅಸಂಖ್ಯಾತರಾದ ಜನರು ಕೂಡಿದ್ದರು. ದಿಕ್ಕು ದಿಕ್ಕುಗಳಿಂದ ರಂಗನಾಯಕನ ಬಂಧುವರ್ಗದವರೇನು, ಮಿತ್ರವರ್ಗದವರೇನು, ಭೃತ್ಯವರ್ಗದವರೇನು ತಂಡೋಪತಂಡವಾಗಿ ಬಂದು ಆಲಯದ ಮುಂದಿನ ವಿಶಾಲವಾದ ಬಯಲಿನಲ್ಲಿ ಗುಂಪುಗೂಡಿದ್ದರು. ತಮ್ಮನ್ನು ಅಲ್ಲಿಗೆ ಕರಸಿದ್ದ ಬಸವ್ಪನಾಯಕನು ಏನಪ್ಪಣೆಕೊಡುವನೋ, ಮುಂದಿನ ಕರ್ತವ್ಯವೇನೋ ತಿಳಿದುಕೊಳ್ಳಲು ಕುತೂಹಲಪಡುತ್ತಿದ್ದರು. ಬಸಪ್ಪನಾಯಕನು ಬಂದೊಡನೆಯೇ ಜಯಧ್ವಾನದಿಂದ ಆಹ್ವಾನವನ್ನಿತ್ತರು. ಲಾವಣ್ಯವತಿಯನ್ನು ನೋಡಿ ನಿಸ್ತಬ್ಧರಾದರು. ಅನೇಕರ ಭಾವವು ಅನೇಕ ರೀತಿಯಿಂದ ಪ್ರವರ್ತಿಸುತ್ತಿತ್ತು. ಆ

ಮುಗ್ಧೆಯನ್ನು ನೋಡಿ ಕಣ್ಣೀರಿಟ್ಟವರು ಕೆಲವರು, ಸಂಗನಾಯಕ ನನ್ನು ನೆನೆದು ದುಃಖಿಸುತ್ತಿದ್ದವರು ಕೆಲವರು, ಅರಸನಿಲ್ಲದ ತಮ್ಮ ಬಾಳ್ವಿಗೆ ಮರುಗುತ್ತಿದ್ದವರು ಕೆಲವರು, ಆಕೆಯನ್ನು ಮತ್ತೊಮ್ಮೆ ನೋಡುವ ಭಾಗ್ಯವು ಲಭಿಸಿತೆಂದು ಸಂತೋಷಿಸುವರು ಕೆಲವರು, ಆಕೆಯ ಧೈರ್ಯ ಸಾಹಸ ಅಭಿಮಾನಗಳನ್ನು ಕೊಂಡಾಡುತ್ತಿದ್ದವರು ಕೆಲವರು.

ಬಸಪ್ಪನಾಯಕನು ಅತಿ ಗಂಭೀರ ಸ್ವರದಿಂದ “ ವೀರಾಗ್ರೇಸರರೇ! ಮಹಾಜನರೇ ನನ್ನ ಬಿನ್ನಹವನ್ನು ತೃಣೀಕರಿಸದೆ, ದಿಕ್ಕು ದಿಕ್ಕುಗಳ ಪಾಲಾಗಿದ್ದ ನೀವೆಲ್ಲರೂ, ಈ ದಿನ ಈ ಸ್ಥಳಕ್ಕೆ ಬಂದುದಕ್ಕೆ ನಿಮಗೆ ನಾನು ಬಹಳ ಕೃತಜ್ಞನಾಗಿರುತ್ತೇನೆ. ಈ ಮಹಾ ಸಭೆಗೆ ಕಾರಣವೂ, ನಿಮ್ಮ ಕರ್ತವ್ಯವೂ, ಕೆಲವರಿಗೆ ತಿಳಿದು, ಕೆಲವರಿಗೆ ತಿಳಿಯದೇಯಿರ ಬಹುದು. ವಿಶದವಾಗಿ ತಿಳುಹಿಸುವ ಭಾರವುನನ್ನ ಮೇಲೆ ಇದೆ.

ಕಳ್ಳನಾಯಿಯಂತೆ, ದಾಸೀಗರ್ಭಜಾತನೂ, ಕ್ರೂರಸ್ವಭಾವಿಯೂ ಆದ ನರಸನಾಯಕನು, ಬೇಟೆಗೆ ಹೋಗಿದ್ದ ಕಾಲದಲ್ಲಿ ನನಗೆ ತಮ್ಮನೂ, ನಿಮಗೆ ಅರಸನೂ ಆದ ಸಂಗನಾಯಕನನ್ನು ಮೋಸದಿಂದ ಕೊಂದನು. ಅಪ್ರಮತ್ತರಾಗಿದ್ದ ನಿಮ್ಮಮೇಲೆ ಬಿದ್ದು, ನಿಮ್ಮನ್ನೆಲ್ಲಾ ದಿಕ್ಕುದಿಕ್ಕುಗಳಿಗೆ ಓಡಿಸಿದನು. ನೀವು ಕಾಯಕಷ್ಟದಿಂದ ಗಳಿಸಿಟ್ಟಿದ್ದ ರತ್ನದ ರಾಶಿಗಳನ್ನು ಕದ್ದೊಯ್ದನು. ನಿಮ್ಮ ಪಟ್ಟಣವನ್ನೇ ಹಾಳುಮಾಡಿದನು. ಅಷ್ಟರಲ್ಲಿ ಸುಮ್ಮನಿರದೆ, ಆ ಕುಮತಿಯು ಕ್ಷತ್ರಿಯ ವಂಶೋತ್ಪನ್ನಳೂ, ನಿಮ್ಮ ಅರಸುಮಗಳೂ ಆದ ಈ ಲಾವಣ್ಯವತಿಯನ್ನು ಮದುವೆಯಾಗೆಂದು ನಿರ್ಬಂಧ ಪಡಿಸಿದನು. ಅಚಲಿತ ಮನಸ್ಕಳಾದ ಈ ಕುಮಾರಿಯು ಅವನನ್ನು ಹೀಯಾಳಿಸಿ ನಿರಾಕರಿಸಲು ಈ ಶುದ್ಧ ಬಿದಿಗೆಯ ವರೆಗೂ ಅವಧಿ ಕೊಟ್ಟಿರುವೆನೆಂದು ಹೇಳಿ ಹೊರಟುಹೋದನು. ಈಗ ಆಕೆಯನ್ನು ಬಲತ್ಕಾರದಿಂದ ಮದುವೆಯಾಗಲು ಬರುತ್ತಿರುವನು.

ಲಾವಣ್ಯವತಿಯು ನರಸನಾಯಕನ ಡಂಬಾಚಾರಕ್ಕೆ ಮರುಳಾಗಿ, ಅವನಿಗೆ ಅರಸಿಯಾಗಲು ಸಮ್ಮತಪಟ್ಟಳೆಂಬ ಚಾಡಿಕೋರರ ಮಾತುಗಳನ್ನು ಕೇಳಿ, ನಾನು ಅತಿ ಕುಪಿತನಾದೆನು. ಅಂಥಾ ವಂಶ ಕಳಂಕವಾದ ಕಾರ್ಯವನ್ನು ಮಾಡುವದಕ್ಕೆ ಮುಂಚೆ ಆಕೆಯನ್ನು ನನ್ನ ಕರವಾಲಕ್ಕೆ ಆಹುತಿ ಕೊಡಬೇಕೆಂದು ಬಂದೆನು. ಮಗಳ ಅಭಿಪ್ರಾಯವು ಅನ್ಯಥಾ ಇರುವುದನ್ನು ನೋಡಿ ಹಿಗ್ಗಿದೆನು. ನರಸ ನಾಯಕನ ಹಾವಳಿಯಿಂದ ತಪ್ಪಿಸಬೇಕೆಂದು ರತ್ನಗಿರಿಯ ಪ್ರಭುವೂ, ಸದ್ವಂಶಜನೂ, ಅಸಮಾನ ವೀರನೂ ಆದ ರಾಮನಾಯಕನ ಮೊರೆಹೊಕ್ಕೆವು. ಅತನು ದೀನಶರಣ್ಯನು. ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಸೈನ್ಯಸಮೇತ ಬರುತ್ತಿರುವನು. ಪೂಜ್ಯರೇ! ಲಾವಣ್ಯ ವತಿಯು ರಾಮನಾಯಕನ ಪಟ್ಟದರಸಿಯಾಗುವಾಕೆ ಇದ್ದಾಳೆ. ಆ ರಾಜಕುಮಾರರನ್ನು ಗೌರವದಿಂದ ಬರಮಾಡಿಕೊಂಡು, ಸತ್ಕರಿಸಿ, ಕನ್ಯಾದಾನಮಾಡುವುದು ನಿಮ್ಮೆಲ್ಲರ ಭಾರವಾಗಿರುವುದು. ಈ ಶುಭಕಾರ್ಯಕ್ಕೆ ವಿಘ್ನಮಾಡಲು ಬರುತ್ತಿರುವ ನರಸನಾಯಕನನ್ನು ಹಿಂದಕ್ಕೆ ಓಡಿಸಬೇಕಾಗಿರುವುದು. ನೀವೇ ಅಸಂಖ್ಯಾತರಾದ ವೀರ ರಿರುತ್ತೀರಿ. ನಿಮಗೆ ಸಹಾಯವಾಗಿ ನನ್ನ ಎರಡುಸಾವಿರ ಸೈನ್ಯವಿದೆ. ರಾಮನಾಯಕನು ತನ್ನ ಹನ್ನೆರಡು ಸಹಸ್ರ ಬಲದೊಡನೆ ಅರಿಜನ ಭಯಂಕರನಾಗಿ, ಬಲಭುಜಪ್ರಾಯನಾದ ಮಂತ್ರೀಂದ್ರನೊಡನೆ ಬರುವನು. ಮಂತ್ರಿಪುಂಗವನಾದ ಭೀಮನಾಯಕನು ಅಸಹಾಯ ಶೂರನು. ಆ ಪರಾಕ್ರಮಿಗಳಿಬ್ಬರೂ ಯುದ್ಧರಂಗದಲ್ಲಿ ನಿಂತರೆ, ನರಸ ನಾಯಕನ ಮೂವತ್ತುಸಾವಿರ ಸೈನ್ಯವು ಮೂರು ಘಳಿಗೆಯಾದರೂ ನಿಲ್ಲಲಾರದು. ಈಗ ಅವನು ಕೊಂಚ ಸೈನ್ಯದೊಡನೆ ಬರುವನು. ನಮ್ಮ ಪ್ರಯತ್ನವು ಅವನಿಗೆ ಗೊತ್ತಿಲ್ಲ. ಅಕಸ್ಮಾತ್ತಾಗಿ ತನ್ನ ಮೇಲೆ ಬೀಳುವ ನಿಮ್ಮನ್ನು ನೋಡಿ ಭ್ರಮೆಗೊಂಡು ಎದೆಯೊಡೆದು ಕಾಲಿಗೆ ಬುದ್ಧಿಹೇಳುವನು. ನಮ್ಮ ಕೆಲಸವು ಸುನಾಯಾಸವಾಗುವುದು. ಆದರೂ, ಕೀಳೆಣಿಸಿ ಮೇಲೆಣಿಸಬೇಕು. ಆದುದರಿಂದ ನೀವೆಲ್ಲರೂ ಆಯುಧಪಾಣಿಗಳಾಗಿ ಯುದ್ಧಕ್ಕೆ ಸಿದ್ಧರಾಗಿರಬೇಕು. ಸಂಗ್ರಾಮವೇ

ಪ್ರಾಪ್ತವಾದರೆ, ಈ ಚಿಕ್ಕರಾಣಿಗಾಗಿ ನಿಮ್ಮ ಪ್ರಾಣಗಳನ್ನಾದರೂ ಅರ್ಪಿಸಬೇಕು. ಹಿಂಜರಿಯಬಾರದು. ತಂದೆಯೋಪಾದಿಯಲ್ಲಿ ಕಾಪಾಡಿದ ಸಂಗನಾಯಕನನ್ನು ನೆನೆಯಿರಿ. ಶ್ರೀ ರಾಮರ ಆಳಿಕೆಯಂತಿದ್ದ ಆತನ ಆಳಿಕೆಯನ್ನು ಜ್ಞಾಪಕಕ್ಕೆ ತಂದುಕೊಳ್ಳಿರಿ. ನಿಮ್ಮ ವೀರಧರ್ಮವನ್ನೂ, ಸ್ವಾಮಿಭಕ್ತಿಯನ್ನೂ, ದೇಶಭಕ್ತಿಯನ್ನೂ ಪ್ರಚುರಗೊಳಿಸಿರಿ. ಈ ತಾಯಿಯ ಮಾನಧನವನ್ನು ಕಾಪಾಡಿರಿ. ರಾಮನಾಯಕನ ಆಶ್ರಯಹೊಂದಿ, ಮತ್ತೆ ನಿಮ್ಮ ಕೋಟೆಯನ್ನು ಜೀರ್ಣೋದ್ಧಾರ ಮಾಡಿಕೊಳ್ಳಿರಿ!! ಹೀಗೆಂದು ಹೇಳಿ ಸುಮ್ಮನಾದನು.

ಲಾವಣ್ಯವತಿಯು ಮುಂದಕ್ಕೆಬಂದು ಮೃದು ಮಧುರವಾಣಿಯಿಂದ ಈ ರೀತಿ ನುಡಿದಳು:— “ವೀರವರೇಣ್ಯರೇ! ಪರದೇಶಿಯಾದ ನನ್ನಲ್ಲಿ ಮರುಕವನ್ನಿಟ್ಟು, ನನ್ನ ರಕ್ಷಣೆಗಾಗಿ ನೀವೆಲ್ಲರೂ ಕಂಕಣಬದ್ಧರಾಗಿ ಬಂದಿರುವುದು ನನ್ನ ಪೂರ್ವಜನ್ಮದ ಸುಕೃತವೋ, ನಿಮ್ಮ ನಿರುಪಮಾನ ರಾಜಭಕ್ತಿಯೋ ತಿಳಿಯಲಾರೆನು. ಪ್ರಾಣಕ್ಕಿಂತಲೂ ಹೆಚ್ಚಾಗಿ ನನ್ನನ್ನು ಕಾಪಾಡುತ್ತಿದ್ದ ತಂದೆಯು ಘಾತಕನಾದ ನರಸನಾಯಕನಿಂದ ಹತನಾದನು ಆ ಮಾತು ಕಿವಿಗೆ ಬಿದ್ದಕ್ಷಣವೇ ನನ್ನ ಜನನಿಯು ಆತ್ಮಹತ್ಯ ಮಾಡಿಕೊಂಡು ಧನ್ಯಳಾದಳು. ನೀವೆಲ್ಲರೂ ದಿಕ್ಕುದಿಕ್ಕಿಗೆ ಓಡಿಹೋದಿರಿ. ನಾನೊಬ್ಬಳೇ ನಿಂತೆನು. ಪ್ರಪಂಚವೆಲ್ಲಾ ಶೂನ್ಯವಾಗಿ ಕಾಣಿಸಿತು. ಏನುಮಾಡಲು ತೋರದೇಹೋಯಿತು. ಆತ್ಮ ಹತ್ಯವಾದರೂ ನನಗೆ ಸ್ಫುರಿಸಲಿಲ್ಲ. ಅಷ್ಟರಲ್ಲಿಯೇ ಕಠಿಣ ಮಾನಸನಾದ ಆ ನರಾಧಮನು ನನ್ನನ್ನು ಮದುವೆಯಾಗೆಂದು ಬಲತ್ಕಾರಮಾಡಿದನು. ನಾನು ಧಿಕ್ಕರಿಸಲು ಮೂರುತಿಂಗಳು ಅವಧಿಯನ್ನು ಕೊಟ್ಟು ಹೋದನು. ಈಗ ಬರುತ್ತಿದ್ದಾನೆ. ನಾನಾದರೋ ರಾಮನಾಯಕನಿಗೆ ಹೃದಯವನ್ನು ಅರ್ಪಿಸಿ, ಭಾರವನ್ನು ದೇವಿಯ ಮೇಲೆಹಾಕಿ, ಆಕೆಯ ಧ್ಯಾನದಲ್ಲಿ ಮಗ್ನಳಾಗಿದ್ದೆನು. ಈ ಬಿದಿಗೆಯು ಸಮೀಪಿಸಿದ ಹಾಗೆಲ್ಲಾ ನನ್ನ ಮರಣವು ಸಮೀಪಿಸಿತೆಂದು ತಿಳಿದಿದ್ದೆನು ಮಾನವರ ಸಹಾಯವು ನನಗೆ ಕಾಣಿಸಲೇ ಇಲ್ಲ.

ಬೆಂಗಾಡಿನಲ್ಲಿ ಬಾಯಾರಿ ಬಳಲುವವನಿಗೆ ಅಮೃತದ ಸರೋವರವು ಕಾಣಿಸಿದಂತೆ, ನಿರ್ಮಾನುಷ್ಯವಾದ ಈ ಕೋಟೆಯಲ್ಲಿ ದಿಕ್ಕು ತಿಳಿಯದೆ ಆತ್ಮಹತ್ಯಕ್ಕೆ ಸಿದ್ಧಳಾಗಿದ್ದ ನನಗೆ ನಮ್ಮ ದೊಡ್ಡಪ್ಪನವರ ಕರುಣಾಕಟಾಕ್ಷವು ಘಟಿಸಿತು. ತಂದೆಯಿಲ್ಲದ ಕೊರತೆಯನ್ನು ಹೋಗಲಾಡಿಸಿ, ವಿಪತ್ಸಾಗರದಲ್ಲಿ ಮುಳುಗಿ ಹೋಗುತ್ತಿದ್ದ ನನ್ನನ್ನು ಕಡೆಹಾಯಿಸಲು ಬಂದಿದ್ದಾರೆ. ನಾನವರಿಗೆ ಎಷ್ಟೋ ಋಣಿಯಾಗಿರುವೆನು. ನೀವೆಲ್ಲರೂ ಬೆಂಬಲವಾಗಿ ನಿಂತು, ನಿಮ್ಮನ್ನೂ, ನನ್ನನ್ನೂ ಉದ್ಧರಿಸಲು ಬರುತ್ತಿರುವ ರಾಮನಾಯಕನಿಗೆ ರಾಜಾರ್ಹವಾದ ಆಹ್ವಾನವನ್ನು ಕೊಡಬೇಕು. ದೊಡ್ಡಪ್ಪನವರ ಹೇಳಿಕೆಯಂತೆ ನಡೆದುಕೊಳ್ಳಬೇಕು. ಇದೇ ನನ್ನ ಪ್ರಾರ್ಥನೆ."

ಲಾವಣ್ಯವತಿಯು ಸುಮ್ಮನಾದಳು. ಸಭಿಕರಲ್ಲೊಬ್ಬ ವೀರನು ಈ ರೀತಿ ನುಡಿದನು. 'ಬಸಪ್ಪನಾಯಕನವರೂ, ಅಮ್ಮನವರೂ ನಮಗಿತ್ತ ಆಜ್ಞೆಗೆ ಬಿನ್ನಾಪವನ್ನು ಮಾಡಬೇಕಾಗಿದೆ. ನಮ್ಮ ಅಭಿಪ್ರಾಯವನ್ನು ನಿವೇದನೆ ಮಾಡುತ್ತೇನೆ. ನಮ್ಮೆಲ್ಲರ ನಾಳನಾಳಗಳಲ್ಲಿಯೂ ವೀರರಕ್ತವು ಪ್ರವಹಿಸುತ್ತಿದೆ. ಹೇಡಿಗಳಿಗೆ ನಾವು ಜನಿಸಲಿಲ್ಲ. ರಣಭೀತರು ನಾವಲ್ಲ. ನರಸನಾಯಕನು ನಮ್ಮೊಡೆಯನನ್ನು ಮೋಸದಿಂದ ಕೊಂದಬಳಿಕ, ಯೋಚನೆ ಹರಿಯದೆ ಯಾರ ದಾರಿ ಅವರು ಹಿಡಿದು ಹೋದೆವಾಗಲಿ, ಪ್ರಾಣದ ಮೇಲಿನ ಆಶೆಯಿಂದ ಅಲ್ಲ. ಯುದ್ಧಭೀತಿಯಿಂದ ಅಲ್ಲ. ಅಮ್ಮನವರಿಗೆ ಬಂದೊದಗಿದ ವಿಪತ್ತಿಗೆ ನಾವೆಲ್ಲರೂ ಸಂಕಟಪಟ್ಟೆವು. ಅವರಿಗೆ ಬೆಂಬಲವಾಗಿ ಒದಗೋಣವೆಂದರೆ ತಕ್ಕ ನಾಯಕನು ಇಲ್ಲದೇ ಹೋದನು. ಅಧ್ಯಕ್ಷನಿಲ್ಲದಿದ್ದರೆ ಎಷ್ಟು ಸೈನ್ಯವಿದ್ದರೆ ತಾನೇ ಏನು ಮಾಡಬೇಕು ? ಭಗವಂತನು ಈ ದಿವಸಕ್ಕೆ ಕರುಣಿಸಿ ಬಸಪ್ಪನಾಯಕನವರ ನಾಯಕತ್ವವನ್ನೂ ರಾಮನಾಯಕನವರ ಸಹಾಯವನ್ನೂ ಕೈಗೂಡಿಸಿಕೊಟ್ಟನು. ನಮ್ಮ ತಂದೆಯೂ, ನಮ್ಮ ಪ್ರಭುವೂ

4] ನಮ್ಮ ದೈವವೂ ಆಗಿದ್ದ ಸಂಗನಾಯಕನನ್ನು ಕೊಂದ ಪಾಪಿಯೊಡನೆ

ಯುದ್ಧಮಾಡಿ ಅವನ ಶಿರವನ್ನು ತರಿದು, ಶರೀರವನ್ನು ಕಡಿ-ಖಂಡ ಗಳಾಗಿಮಾಡಿ ಹದ್ದು ಕಾಗೆಗಳಿಗೆ ಹಾಕುವವರೆಗೂ ನಮಗೆ ಸಮಾಧಾನ ವಾಗಲಾರದು. ತಮ್ಮ ಅಪ್ಪಣೆಯನ್ನು ಶಿರಸಾವಹಿಸಿ ನಡೆಸುತ್ತೇವೆ." ಹೀಗೆಂದು ನಿವೇದಿಸಿ ಆತನು ಸುಮ್ಮನಾಗಲು ಸಭಿಕರು ಶ್ಲಾಘನೆ ಮಾಡುತ್ತಾ ಜಯಧ್ವನಿ ಮಾಡಿದರು ? ಬೇರೆ ಬೇರೆ ಕಾರ್ಯಗಳಲ್ಲಿ ನಿಯಮಿತರಾಗಿ ಹೊರಟುಹೋದರು. ಲಾವಣ್ಯವತಿಯು ಸಂತೃಪ್ತ ಮಾನಸಳಾಗಿ ಬಸಪ್ಪನಾಯಕನೊಡನೆ ಅಂತಃಪುರಕ್ಕೆ ಹೋದಳು.

---

# ೬ನೆಯ ಪ್ರಕರಣ.

ಅತ್ತ ಭೀಮನಾಯಕನು ಏನು ಮಾಡುವನೋ ನೋಡುವ. ರಂಗನಾಯಕಿಯ ವಾಕ್ಯಜಾಲದಿಂದ ಪ್ರೇರಿತನಾಗಿ, ರಾಜಸೇವಾ ಧುರಂಧರನಾಗಿ ಕದನದಲ್ಲಿ ನರಸನಾಯಕನೊಡನೆ ಹೋರಾಡಲು ನಿಶ್ಚಯಿಸಿಕೊಂಡಿದ್ದನು. ನಿದ್ರಾಹಾರಗಳನ್ನು ಸಹಾ ಗಣಿಸದೆ, ಸೈನ್ಯವನ್ನು ಅತಿ ತ್ವರಿತದಿಂದ ನಡೆಯಿಸಿ ಸರಿರಾತ್ರಿಗೆ ಪಾವಗಡವನ್ನು ಸೇರಿದನು. ಭೋಜನಾದಿಗಳಿಗೆ ಮುಂಚೆಯೇ ಏರ್ಪಾಟುಗಳನ್ನು ಮಾಡಿದ್ದನು. ಭೋಜನಾನಂತರ ಸೈನಿಕರೆಲ್ಲರೂ ನಿಶ್ಯಬ್ದರಾಗಿ ನಿದ್ರೆಮಾಡಬೇಕೆಂದು ಆಜ್ಞೆಮಾಡಿದನು. ನಿದ್ರಾರಹಿತರಾದರೆ ಹಿಂದಿನ ದಿನದ ಮಾರ್ಗಾಯಾಸವು ತೀರುವುದಿಲ್ಲ. ಮಾರನೇ ದಿನದ ಕಾಳಗಕ್ಕೆ ಬಲಹೀನರಾಗಿರುವರೆಂದು ಆತಗೆ ಗೊತ್ತಿತ್ತು. ಅವರೆಲ್ಲರೂ ಮೈಮರೆದು ನಿದ್ರೆಮಾಡುವ ಸಮಯದಲ್ಲಿ ನರಸನಾಯಕನು ಬಂದಾನೆಂದು ತಾನು ಮಾತ್ರ ಅಶ್ವಾರೂಢನಾಗಿ ಕಾವಲು ಕಾದಿದ್ದನು. ರಾಜಭಕ್ತಿಯು ಆತನನ್ನು ಭೃತ್ಯರ ಭೃತ್ಯನನ್ನಾಗಿ ಮಾಡಿತ್ತು. ದಿವಂಗತಳಾದ ಸತೀಮಣಿಯು ಆತನ ಸತ್ವವನ್ನು ದ್ವಿಗುಣೀಕೃತ ಮಾಡಿದ್ದಳು. ನರಸನಾಯಕನನ್ನು ಹಿಮ್ಮೆಟ್ಟಿಸಬೇಕೆಂಬ ಉತ್ಸಾಹದಿಂದ ಆತಗೆ ಮಾರ್ಗಾಯಾಸವು ಕಾಣಲಿಲ್ಲ.

ಈ ರೀತಿ ಆ ವೀರಾಗ್ರಣಿಯು ಪಹರಾ ಕೆಲಸದಲ್ಲಿರುವ ವೇಳೆಯಲ್ಲಿ ಅವನ ಗುಪ್ತಚಾರರು ಬಂದರು. ಅವರು ಒಂದೇ ಓಟದಿಂದ ಆತನ ಬಳಿಗೆ ಬಂದಿದ್ದರು. ಆಯಾಸದಿಂದ ಕೆಲವು ಕಾಲ ಮಾತನಾಡಲು ಚೈತನ್ಯಹೀನರಾಗಿದ್ದರು. ಭೀಮನಾಯಕನು ಆತುರದಿಂದ “ ಚಾರರೇ ! ಏನು ವಾರ್ತೆ ? ನರಸನಾಯಕನು ಬರುತ್ತಿರುವನೇ ಹ್ಯಾಗೆ ? ” ಎಂದು ಕೇಳಿದನು.

**ಚಾರ**— ಪ್ರಭುವೇ ! ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ನರಸನಾಯಕನು ಸೈನ್ಯದೊಡನೆ ಬಂದು ನಿಂತಿರುವನು.

**ಭೀಮನಾಯಕ:**— ಏನು ಮಾಡುತ್ತಿರುವನು?

**ಚಾರ:**— ಸೈನ್ಯದೊಡನೆ ನಿದ್ರೆಮಾಡುತ್ತಿರುವನು.

**ಭೀಮನಾಯಕ:**— ಸೈನ್ಯವು ಎಷ್ಟಿರಬಹುದು?

**ಚಾರ:**— ಆಕಾಶದಲ್ಲಿರುವ ನಕ್ಷತ್ರಗಳ ಸಂಖ್ಯೆ ಹೇಳಬಹುದಾಗಲಿ, ಆತನ ಸೈನ್ಯದ ಸಂಖ್ಯೆಯು ಹೇಳಲು ಸಾಧ್ಯವಿಲ್ಲ.

ಭೀಮನಾಯಕನು ಕುದುರೆಯಿಂದ ಕೆಳಗಿಳಿದು ದೀರ್ಘವಾಗಿ ಯೋಚನೆ ಮಾಡಿದನು. "ನರಸನಾಯಕನು ಅಷ್ಟು ಸೈನ್ಯವನ್ನು ತರಲು ಕಾರಣವೇನು? ನಾವು ಬಸಪ್ಪನಾಯಕನಿಗೆ ಸಹಾಯವಾಗಿ ಬರುವುದನ್ನು ಗುಪ್ತಚಾರದಿಂದ ತಿಳಿದುಕೊಂಡಿರುವನೋ ಯೇನೋ ಆತನ ಅಷ್ಟು ದೊಡ್ಡ ಸೈನ್ಯದ ಮುಂದೆ ನನ್ನ ಹತ್ತುಸಾವಿರ ಭಟರು ನಿಲ್ಲಬಲ್ಲರೇ. ನನಗೆ ಅಪಜಯವಾಗಿ ನರಸನಾಯಕನು ಸಿಡಗಲ್ಲಿಗೆ ಹೋದದ್ದೇ ನಿಜವಾದರೆ ಅಲ್ಲಿನ ಸ್ವಲ್ಪ ಸೈನ್ಯವನ್ನು ನಿರಾಯಸವಾಗಿ ಸೋಲಿಸುವನು. ರಾಮನಾಯಕನನ್ನು ಪ್ರಾಣದಿಂದ ಬಿಡನು. ಲಾವಣ್ಯವತಿಯ ಮಾನಚ್ಯುತಿಯು ತಪ್ಪುವುದಿಲ್ಲ. ಏನುಮಾಡಲಿ? ನಿದ್ರೆಯಲ್ಲಿ ಮೈಮರೆದು ಮಲಗಿರುವವರ ಮೇಲೆ ಬೀಳುವುದು ಸುಲಭವಾದಕಾರ್ಯ. ಆದರೆ ಅದು ಯುದ್ಧಧರ್ಮವಲ್ಲ, ಎದುರುನಿಂತು ಹೋರಾಡಬೇಕು. ಮೋಸಮಾರ್ಗವನ್ನು ಹುಡುಕಿದರೆ ಈ ಯುದ್ಧದಲ್ಲಿ ಜಯಹೊಂದಬಹುದಾಗಲಿ. ವಂಶದ ಹೆಸರು ಹಾಳಾಗಿ ಹೋಗುವುದು." ಹೀಗೆಂದು ಯೋಚಿಸುತ್ತಿರಲು ಚಾರರಲ್ಲೊಬ್ಬನು "ಸ್ವಾಮೀ! ತಾವು ಸುಮ್ಮನೇ ಕುಳಿತರೆ ಫಲವಿಲ್ಲ. ನಮ್ಮ ಸೈನ್ಯವನ್ನು ಎಚ್ಚರಗೊಳಿಸಿ, ಮುಂದಕ್ಕೆ ನಡೆಯಿಸಿ ನರಸನಾಯಕನಮೇಲೆ ಬಿದ್ದು ಹಿಂದಿರುಗಿಸಬೇಕು. ಅವನು ಎಚ್ಚತ್ತಮೇಲೆ ನಮ್ಮನ್ನು ನಿರಾಯಾಸದಿಂದ ಜಯಿಸುವನು." ಎಂದು ಉಸುರಿದನು.

**ಭೀಮನಾಯಕ:**— ಅದು ವೀರರ ಧರ್ಮವಲ್ಲ. ಮಲಗಿದವರನ್ನು ಕೊಲ್ಲುವ ಹೇಡಿಗಳು ರತ್ನಗಿರಿಯವರೆಂಬುವ ಅಪವಾದವನ್ನು ತಂದುಕೊಳ್ಳಲಾರೆನು.

**ಚಾರ**:— ಮೋಸದ ಯುದ್ಧವುಬೇಡ. ವೈರಿಗಳಿಗೆ ವರ್ತಮಾನವನ್ನು ಕಳುಹಿಸಿ ಯುದ್ಧವನ್ನು ಪ್ರಾರಂಭಮಾಡೋಣ. ಅವರನ್ನು ಇಲ್ಲಿಯವರೆಗೆ ಬರಗೊಡಿಸುವುದಕ್ಕಿಂತಲೂ, ನಾವೇಹೋಗಿ ಹಿಮ್ಮೆಟ್ಟಿಸೋಣ.

**ಭೀಮನಾಯಕ** :— ಅದು ಸರಿಯಾದ ಯೋಚನೆಯಲ್ಲ. ದೀರ್ಘಪ್ರಯಾಣದಿಂದ ಸೈನ್ಯವು ಬಹಳವಾಗಿ ಬಳಲಿರುವದು. ನಿದ್ರಾಭಂಗ ಒಂದು, ಮತ್ತೊಮ್ಮೆ ನಾಲ್ಕಾರುವೈಲು ಪ್ರಯಾಣದ ಶ್ರಮ ಒಂದು,ಅವರನ್ನು ಶಕ್ತಿಹೀನರನ್ನಾಗಿ ಮಾಡುವುದು. ಸೈನ್ಯವೆಲ್ಲವೂ ಗಾಢನಿದ್ರೆಯಲ್ಲಿರುವದು. ನಾಲ್ಕಾರು ಘಂಟೆಗಳ ನಿದ್ರೆಯಿಂದ ಅವರ ಬಳಲಿಕೆಯು ಕಡಿಮೆಯಾಗುವುದು. ನಾಳಿನಸಂಗ್ರಾಮವು ಘೋರವಾದದ್ದೆಂದು ನಿನ್ನ ಮಾತುಗಳಿಂದ ತಿಳಿಯಬರುತ್ತಲಿದೆ. “ಇಡೀ ಸೈನ್ಯಕ್ಕೆ ಆಹಾರವನ್ನು ಸಿದ್ಧಗೊಳಿಸಿರಿ. ಆರುಘಂಟೆಗಳಿಗೆ ಸರ್ವರೂ ಭೋಜನಾದಿಗಳನ್ನು ತೀರಿಸಿಕೊಂಡು ಯುದ್ಧಕ್ಕೆ ಸಿದ್ಧರಾಗಬೇಕು. ಈಗ ಮಾತ್ರ ಸೈನಿಕರಲ್ಲಿ ಯಾರೊಬ್ಬರಿಗೂ ನಿದ್ರಾಭಂಗವನ್ನು ಮಾಡಬೇಡಿರಿ.” ಎಂದು ಆಜ್ಞೆಮಾಡಿ ಮಾರನೆಯದಿನದ ಕಾರ್ಯಕ್ರಮದಬಗ್ಗೆ, ತನ್ನಲ್ಲಿ ತಾನು ಯೋಚಿಸುತ್ತಿದ್ದನು.

ನರಸನಾಯಕನು ಸೈನ್ಯದೊಡನೆ ಸರಿರಾತ್ರಿಯವರೆಗೂ ನಿದ್ರೆ ಮಾಡಿದನು. ಇನ್ನು ಅವನಿಗೆ ನಿದ್ರೆಹತ್ತದೆ ಹೋಯಿತು. ಲಾವಣ್ಯವತಿಯ ಪಾಣಿಗ್ರಹಣದ ಉತ್ಸಾಹವು ಅವನನ್ನು ನಿದ್ರೆಮಾಡಗೊಡಲಿಲ್ಲ. ತಾನು ಮಾಡಲೆಣಿಸಿದ್ದುದು ನೀಚಕಾರ್ಯವೆಂದು ಅವನ ಅಂತರಾತ್ಮವು ಒಂದುಕಡೆ ಎಚ್ಚರಿಸುತ್ತಲೇ ಇತ್ತು. ಬಸಪ್ಪನಾಯಕನು ಬೇರೆ ಪಾಳೆಯಗಾರರ ಸಹಾಯದಿಂದ ತನ್ನ ಮನೋರಥಸಿದ್ಧಿಗೆ ವಿಘ್ನಮಾಡಬಹುದೆಂಬ ಭಯವು ಒಂದುಕಡೆ ಇದ್ದೇ ಇತ್ತು. ಇವೆಲ್ಲವನ್ನು ಚತುರೋಪಾಯಗಳಿಂದ ಜಯಿಸಬಹುದಾಗಲಿ, ಮೂಲಕಾರಣಳಾದ ಲಾವಣ್ಯವತಿಯು, ತನ್ನನ್ನು ಮುಖಾಮುಖಿ ಹಿಯ್ಯಾಳಿಸಿ ಕಳುಹಿಸಿದ್ದ ಲಾವಣ್ಯವತಿಯು, ಆತ್ಮಹತ್ಯವನ್ನು ಮಾಡಿಕೊಂಡರೆ

ಗಾನು ಮಾಡುವುದಾದರೂ ಏನು? ಎಂಬುವ ಯೋಚನೆಯು ಅವ ನನ್ನು ನಿರುತ್ಸಾಹಗೊಳಿಸುತ್ತಿತ್ತು. ಕೈಲಾದಷ್ಟು ಜಾಗ್ರತೆಯಾಗಿ ುಡಗಲ್ಲು ಸೇರಬೇಕೆಂದು ನಿಶ್ಚಯಿಸಿಕೊಂಡನು. ಮಾರ್ಗಾಯಾಸ ುಂದ ಬಳಲಿ ಗಾಢನಿದ್ರಾಪರವಶರಾಗಿದ್ದ ಸೈನಿಕರನ್ನು ಆ ನಡುರಾತ್ರಿ ುಲ್ಲಿಯೇ ಎಚ್ಚರಗೊಳಿಸಿ ಪ್ರಯಾಣಕ್ಕೆ ಆಜ್ಞೆಮಾಡಿದನು. ಸೈನ್ಯವು ಇಪ್ಪತ್ತುಸಾವಿರ. ಸಂಪೂರ್ಣ ಯುದ್ಧಸನ್ನಾಹಗಳಿಂದ ಬಂದವ ಲ್ಲ. ಮದುವೆಯೆಂಬ ಭ್ರಾಂತಿಯು ಎಲ್ಲರಿಗೂ ಇತ್ತು. ನಿದ್ರೆಯ ಮಬ್ಬಿನಲ್ಲಿ ಅವರು ಮೆಲ್ಲಮೆಲ್ಲನೆ ಸಾಗುತ್ತಿದ್ದರು. ಸೂರ್ಯೋದಯ ಸಮಯಕ್ಕೆ ಪಾಗೊಂಡೆಯನ್ನು ಸೇರಿ, ತಮಗಾಗಿ ಹೊಂಚುಹಾಕಿ ಕೊಂಡಿದ್ದ ರತ್ನಗಿರಿ ಸೈನ್ಯವನ್ನು ನೋಡಿ ವಿಸ್ಮಿತರಾದರು. ಹಗೆಯ ವರ ಆಯುಧಗಳು ಬಾಲಭಾನುವಿನ ಕಿರಣಜಾಲದಲ್ಲಿ ಥಳಥಳ ಹೊಳೆ ಯುತ್ತಿದ್ದವು. ಸೈನಿಕರ ಮುಖಗಳು ಸಹಿತ ಆ ಎಳೆಬಿಸಿಲಿನಲ್ಲಿ ಮೆರೆ ಯುತ್ತಿದ್ದವು. ಅದೇ ಸೂರ್ಯನೇ ನಿದ್ರಾಭಂಗದಿಂದ ಮೋರೆಬಾಡಿದ ತಮ್ಮನ್ನು ಮತ್ತಷ್ಟು ಬಳಲಿಸುತ್ತಿದ್ದನು. ತನಗೆ ವೈರಿಗಳಿದ್ದರೆ ನಿಡ ಗಲ್ಲಿನಲ್ಲಿ ಎದುರು ಬೀಳುವರೆಂದು ನರಸನಾಯಕನು ತಿಳಿದಿದ್ದನಾಗಲಿ, ಪಾಗೊಂಡೆಯ ಬಳಿಯಲ್ಲಿ ತನ್ನ ಮಾರ್ಗಕ್ಕೆ ಅಡ್ಡಬರುವರೆಂದು ಅವನು ಕನಸಿನಲ್ಲಾದರೂ ಅಂದುಕೊಂಡವನಲ್ಲ. ಆ ಪ್ರಾಂತವೆಲ್ಲವನ್ನೂ ತನ್ನ ಹೊಡತದಿಂದ ಅಷ್ಟಕ್ಕೆ ಮುಂಚೆಯೇ ಹಾಳುಮಾಡಿದ್ದನು. ಅವನ ಹೆಸರೆಂದರೆ ಅಲ್ಲಿನ ಹಳ್ಳಿಗಳಲ್ಲಿ ಅಳುವಕೂಸು ಸುಮ್ಮನಾಗು ತ್ತಿತ್ತು. ಅಂಥಾ ತನ್ನನ್ನು ಕೆಣಕುವವರು ಆ ಪ್ರಾಂತದಲ್ಲಿ ಯಾರೂ ಯಿರಲಿಲ್ಲ. ಆದಕಾರಣ ಅವನು ಒಬ್ಬ ಚಾರನನ್ನು ಕರೆದು "ನೂರು ವರುಷತುಂಬಿ ನನಗೆ ಅಡ್ಡಬಂದಿರುವ ಅವನು ಯಾರೋ ತಿಳಿದು ಕೊಂಡು ಬಾ" ಎಂದು ಆಜ್ಞೆ ಮಾಡಿದನು.

ಆ ಚಾರನು ಭೀಮನಾಯಕನ ಬಳಿಗೆ ಬಂದು "ಅಯ್ಯಾ! ನೀವು ಯಾರು? ನಿಮ್ಮ ಹೆಸರೇನು? ರಾಜ್ಯವಾವುದು? ನಾನು ಪೆನುಗೊಂಡೆಯ ಪ್ರಭುವಾದ ನರಸನಾಯಕನ ಚಾರನು. ನಮ್ಮ ರಾಜನು ಈ ಮಾರ್ಗವನ್ನು ಹಿಡಿದು ನಿಡಗಲ್ಲಿಗೆ ಹೋಗುವವನಿದ್ದಾನೆ!

ಅವರ ಮಾರ್ಗಕ್ಕೆ ನೀವು ಅಡ್ಡಬಂದು ನಿಲ್ಲಲು ಕಾರಣವೇನು ?" ಎಂದು ಕೇಳಿದನು. ಅದಕ್ಕೆ ಭೀಮನಾಯಕನು " ಎಲೈ, ಚಾರನೇ ! ನಾನು ರತ್ನಗಿರಿಗೆ ಒಡೆಯನಾದ ರಾಮನಾಯಕನ ಮಂತ್ರಿಯು. ಭೀಮ ನಾಯಕನೆಂದು ನನ್ನನ್ನು ಕರೆಯುವರು. ನಿಮ್ಮ ರಾಜನು ನಿಡಗಲ್ಲು ಸಂಗನಾಯಕನ ಕುವರಿಯನ್ನು ಬಲವಂತದಿಂದ ಮದುವೆಯಾಗಲು ಪ್ರಯತ್ನಿಸುತ್ತಿರಲು, ಆ ಲಲನೆಯು ನಮ್ಮ ಪ್ರಭುವನ್ನು ಮೊರೆ ಹೊಕ್ಕಿರುವಳು. ರಾಮನಾಯಕನು ಆ ಯುವತೀರತ್ನವನ್ನು ಪಾಣಿ ಗ್ರಹಣಮಾಡಲೋಸುಗ ನಿಡಗಲ್ಲಿಗೆ ಹೋಗಿರುವನು. ಉಚಿತರೀತಿ ಯಿಂದ ಬುದ್ಧಿಮಾತುಗಳನ್ನು ಹೇಳಿ ನರಸನಾಯಕನನ್ನು ಹಿಂದಕ್ಕೆ ಕಳುಹಿಸಲು ನನಗೆ ಆಜ್ಞೆಮಾಡಿರುವನು. ಹೋಗಿ ಈ ಮಾತನ್ನು ನಿಮ್ಮ ದೊರೆಗೆ ತಿಳುಹಿಸು. ಆತನು ಬುದ್ಧಿತಂದುಕೊಂಡು ಹಿಂದಿ ರುಗಿ ಹೋದರೆ ಸಮ್ಮತವೇ. ಇಲ್ಲವಾದರೆ ನನ್ನೊಡನೆ ಯುದ್ಧಮಾಡಿ ನನ್ನನ್ನು ಗೆಲಿದು ಮುಂದಕ್ಕೆ ಹೋಗಬಹುದು." ಎಂದು ಹೇಳಿದನು

ಚಾರನು ಹಿಂದಕ್ಕೆ ತೆರಳಿ ಭೀಮನಾಯಕನ ನುಡಿಗಳನ್ನು ತನ್ನ ಒಡೆಯನಿಗೆ ತಿಳುಹಿಸಲು, ಆತನು ಕಿಡಿಕಿಡಿಯಾಗಿ " ಎಲೈ ಭಟನೇ ! ಇಂಥ ದುಡುಕುಮಾತುಗಳನ್ನಾಡಿದ ಅವನ ಶಿರವನ್ನು ಕಡಿದು ತರದೆ ಸುಮ್ಮನೇ ಏತಕ್ಕೆ ಬಂದೆ ! ನಾನು ಒರಿಸಿದ ಕನ್ಯೆಯನ್ನು ಪರಿ ಣಯವಾಗಬೇಕೆಂದರೆ ರಾಮನಾಯಕನಿಗೆ ಎಷ್ಟು ಗರ್ವವಿರಬೇಕು ? ಅವನನ್ನೇನು ಮಾಡಿದರೂ ನನ್ನ ಕೋಪಾಗ್ನಿಯು ತಣ್ಣಗಾಗಲಾರದು. ಈಗಲಾದರೂ ಅವನು ಬುದ್ಧಿತಂದುಕೊಂಡು ಶರಣಾಗತನಾದರೆ ಮನ್ನಿಸಿಬಿಡುವೆನು. ಭೀಮನಾಯಕನು ಸಹಿತ ನಮ್ಮೊಡನೆ ಬರಲಿ. ಎಲ್ಲರೂ ಕಲೆತು ನಿಡಗಲ್ಲಿಗೆ ಹೋಗುವ. ರಾಮನಾಯಕನ ಹುಡುಗ ಬುದ್ಧಿಯನ್ನು ಕ್ಷಮಿಸಿ, ಲಾವಣ್ಯವತಿಯನ್ನು ಮದುವೆಯಾಗುವೆನು. ನಿಮ್ಮೆಲ್ಲರನ್ನೂ ಗೌರವದಿಂದ ಸತ್ಕರಿಸುವೆನು. ಇಡೀ ಸೈನ್ಯಕ್ಕೆ ಬಹು ಮಾನಗಳನ್ನು ಹಂಚುವೆನು. ಭೀಮನಾಯಕನನ್ನು ನಿಡಗಲ್ಲು ಗದ್ದು ಗೆಯ ಮೇಲೆ ಕುಳ್ಳಿರಿಸುವೆನು. ಅದುಬಿಟ್ಟು ಅಹಂಕಾರದಿಂದ ದಾರಿಗೆ

ಅಡ್ಡಬಂದರೆ ಅರಘಳಿಗೆಯಲ್ಲಿ ಅವನನ್ನು ಹದ್ದುಕಾಗೆಗಳಿಗೆ ಹಾಕಿಸುವೆನೆಂದು ತಿಳುಹಿಸು.” ಎಂದು ರಾಯಬಾರವನ್ನು ಕಳುಹಿಸಿಕೊಟ್ಟನು.

ಆತನ ಆಜ್ಞಾನುಸಾರ ಚಾರರು ಭೀಮನಾಯಕನ ಬಳಿಗೆಬಂದು ತಮ್ಮ ಪ್ರಭುವಿನ ಸಂದೇಶವನ್ನು ತಿಳುಹಿಸಿದರು. ಅದನ್ನು ಕೇಳಿದ ಕೂಡಲೇ ಆತನು ಕೆಣಕಿದ ನಾಗರಹಾವಿನಂತೆ ಸಿಟ್ಟಿಗೆದ್ದು “ ಎಲೋ, ಚಾರರೇ! ಉಚ್ಛಮಾನವನಾದ ನಿಮ್ಮ ಅರಸನಿಗೆ ನನ್ನ ಮಾತುಗಳನ್ನೀರೀತಿ ಹೇಳಿರಿ. ನನ್ನನ್ನು ಹದ್ದುಕಾಗೆಗಳಿಗೆ ಹಾಕುವಷ್ಟು ಬಲವು ಅವನ ಭುಜದಲ್ಲಿಲ್ಲ. ಕ್ಷತ್ರಿಯ ವಂಶದಲ್ಲುದಿಸಿದ ನಾನೆಲ್ಲಿ? ಅಲ್ಪ ಕುಲಜಾತನಾದ ಅವನೆಲ್ಲಿ? ಕುಲದಲ್ಲಿ ನೀಚ, ಬುದ್ಧಿಯಲ್ಲಿ ಉಚ್ಛ, ಬಲದಲ್ಲಿ ಹೇಡಿ, ಗುಣದಲ್ಲಿ ದ್ರೋಹಿ, ಈ ತನ್ನ ಲೋಪಗಳನ್ನು ತಾನರಿಯದೆ ನನಗೆ ಬುದ್ಧಿಯನ್ನು ಹೇಳಲು ನಿಂತಿರುವನೋ? ಕಪಟೋಪಾಯದಿಂದ, ರಾಜದ್ರೋಹವೆನ್ನದೆ, ಪ್ರಭುವಾದ ಹನುಮನಾಯಕನಿಗೆ ವಿಷವನ್ನುಣಿಸಿ ಕೊಂದಾಗ ಮಿಕ್ಕಪಾಳೆಯಗಾರರು ಸುಮ್ಮನಿದ್ದದ್ದು ಇವನನ್ನಿಷ್ಟಕ್ಕೆ ತಂದಿರುವುದು. ರಾಜ್ಯಾಕ್ಷಾಧಿಪತಿಯಾಗಗೊಡಿಸದೆ, ಗದ್ದುಗೆಯಿಂದ ಕಡೆಗೆನೂಕಿ ಅವನ ಸ್ಥಾನದಲ್ಲಿ ಅವನನ್ನು ನಿಲ್ಲಿಸಬೇಕಾಗಿತ್ತು. ಪಾಳೆಯಗಾರರ ದುರ್ದೈವದ ಪೆಸೆಯಿಂದ ಆ ಬುದ್ಧಿಯು ಯಾರಿಗೂ ಹುಟ್ಟಲಿಲ್ಲ. ಅಷ್ಟಕ್ಕೆ ಅಡಗಿ ಮಡಗಿ ಇರದೆ, ಅವನು ನಿಡಗಲ್ಲಿಗೆ ಹೋಗಿ ವಂಚಕತನದಿಂದ ಸಂಗನಾಯಕನನ್ನು ಕೊಂದು ಆ ರಾಜ್ಯವನ್ನೇ ಹಾಳುಮಾಡಿದನು. ಜಯಲಕ್ಷ್ಮಿಯು ಅವನ ಪಕ್ಷವನ್ನೇ ವಹಿಸಿದಳು. ಅಲ್ಲಿಗೂ ಸರ್ವರೂ ಸುಮ್ಮನಿದ್ದರು. ಅವನ ಗೋಜು ಯಾರಿಗೂ ಬೇಕಾಗಿರಲಿಲ್ಲ. ಅವನ ಸಿರಿಯನ್ನು ನೋಡಿ ಯಾರೂ ಅಸೂಯೆಪಡುತ್ತಿರಲಿಲ್ಲ. ಅವನ ಕಡೆಯಾದರೂ ಲಕ್ಷ್ಯ ಕೊಡುತ್ತಿರಲಿಲ್ಲ. ರಾಜ್ಯದ ಮದವು ತಲೆಗೇರಿತು. ಅವನ ಕಣ್ಣಿಗೆ ನೆಣವು ಮುಚ್ಚಿತು. ಕೇಡುಗಾಲವು ಸಮೀಪಿಸಿತು. ಆದಕಾರಣ ಅಬಲೆಯರಮೇಲೆ ಕೈ ಹಾಕಲು ಉಪಕ್ರಮಿಸಿರುವನು. ಅದರಲ್ಲಿ ಲಾವಣ್ಯವತಿಯಮೇಲೆ! ಆಕೆಯನ್ನು ಮದುವೆಯಾಗುವ ಯೋಗ್ಯತೆಯು

ಅವನಿಗೆ ಕುಲದಲ್ಲಿಯಾಗಲೀ ಬಲವಲ್ಲಿಯಾಗಲೀ ಇಲ್ಲ. ಆಕೆಯ ಮೇಲಿನ ಕೋರಿಕೆಯು ಮೃತ್ಯುವಿನ ಮೇಲಿನ ಹಂಬಲಿಕೆಯೆಂದು ತಿಳುಹಿಸು. ಬುದ್ಧಿ ತಂದುಕೊಳ್ಳಬೇಕಾದದ್ದು ತಾನು. ಹಿಂದಿರುಗಲಿ; ಇಲ್ಲವಾದರೆ ನನ್ನನ್ನು ಜಯಿಸಿ ದಾರಿಮಾಡಿಕೊಂಡು ನಿಡಗಲ್ಲಿಗೆ ಹೋಗಲಿ."

ಚಾರರು ಬದಲು ಮಾತಾಡದೆ ಹಿಂದಿರುಗಿ ಹೋಗಿ ಇದೆಲ್ಲವೂ ನರಸನಾಯಕನಿಗೆ ತಿಳುಹಿಸಿದರು ಆತನು ಕೋಪಾರುಣಿತ ನೇತ್ರನಾಗಿ ಸೈನಿಕರನ್ನು ಕುರಿತು "ಎಲೋ ಭಟರಿರಾ! ರಾಮನಾಯಕನ ಸೈನ್ಯ ವೆಲ್ಲವೂ ಕಲೆತು ಹತ್ತುಸಾವಿರವಿಲ್ಲ. ನಮ್ಮ ಬಲವು ಅದರ ಎರಡ ರಷ್ಟಿದೆ. ಭೀಮನಾಯಕನೆಷ್ಟರವನಾದಾನು? ಕ್ಷಣಮಾತ್ರದಲ್ಲಿ ಅವ ನನ್ನು ಗೆದ್ದು ಮುಂದಕ್ಕೆ ನಡೆಯಬೇಕಾಗಿದೆ. ಆಲಸ್ಯ ಮಾಡಬೇಡಿರಿ" ಎಂದು ಆಜ್ಞೆಯನ್ನಿತ್ತನು. ಸೈನ್ಯದಲ್ಲಿ ಕಲಕಲವು ಹೆಚ್ಚಾಯಿತು. ಆಯುಧಗಳನ್ನು ಒರೆಯಿಂದೀಚೆಗೆ ತೆಗೆದು ಭೀಕರನಾದವನ್ನು ಮಾಡುತ್ತಾ ಮುಂದಕ್ಕೆ ಹೆಜ್ಜೆ ಹಾಕಿದರು. ರತ್ನಗಿರಿ ಸೈನ್ಯವು ಸಿದ್ಧ ವಾಗಿಯೇ ಇತ್ತು. ಎರಡೂ ಸೈನ್ಯಗಳು ಒಂದನ್ನೊಂದು ಡೀಕೊಂ ಡವು. ಅರಘಳಿಗೆಯಲ್ಲಿ ಆ ರಂಗವು ಮೃತ್ಯುದೇವತೆಯ ನಾಟ್ಯರಂಗ ವಾಯಿತು. ಎಲ್ಲಿನೋಡಿದರೂ ಆಯುಧಗಳ ಹೊಡತಗಳು, ವೀರರ ಹಾಹಾಕಾರಗಳು. ಹೊಡೆದ ತಲೆ. ಕಡಿದ ಅವಯವಗಳು. ಹರಿಯುವ ರಕ್ತ. ಸುರಿಯುವ ಕಂಬನಿ.

ನರಸನಾಯಕನು ನಿಡಗಲ್ಲಿಗೆ ಪ್ರಯಾಣ ಮಾಡಿದಾಗ ಲಾವಣ್ಯ ವತಿಯು ತನಗೆ ಸಿಕ್ಕಿದಳೆಂಬ ಹಿಗ್ಗಾಗಲಿ ಬೇರೆ ಇರಲಿಲ್ಲ. ಎದುರು ಬಿದ್ದರೆ ಬಸಪ್ಪನಾಯಕನೊಬ್ಬನು. ಅವನನ್ನು ಅರಘಳಿಗೆಯಲ್ಲಿ ನಿರ್ನಾಮಗೊಳಿಸುವೆನೆಂಬ ಗರ್ವ. ರಾಮನಾಯಕನಾಗಲಿ ಮತ್ತಾವ ಪಾಳಯಗಾರರೇ ಆಗಲಿ ಆತಗೆ ಬೆಂಬಲ ಬರುವರೆಂದು ಅನುಮಾನಿಸಿ ದ್ದಿಲ್ಲ. ಭೀಮನಾಯಕನು ತನಗೆ ಅಡ್ಡಬಂದದ್ದು ನೋಡಿ "ನಿಜ ವಾಗಿಯೂ ಲಾವಣ್ಯವತಿಯು ನನ್ನನ್ನು ಧಿಕ್ಕರಿಸಿ ರಾಮನಾಯಕನನ್ನು

ವರಿಸಿರುವಳೋ, ಇಲ್ಲವೇ ಆಕೆಯ ರೂಪಿಗೆ ಮರುಳಾಗಿ ರಾಮನಾಯು ಕನೇ ಇಷ್ಟುಕೆಲಸ ಮಾಡಿರುವನೋ ತಿಳಿಯದೆ ಹೋಯಿತು. ” ಎಂದು ಯೋಚಿಸುತ್ತಿದ್ದನು. ರಣರಂಗದ ಕಡೆಗೆ ಗಮನ ಕೊಡಲಿಲ್ಲ. ಜಯಾ ಪಜಯಗಳು ದೈವಾಧೀನಗಳೆಂದು ಅವನು ತಿಳಿಯಲಿಲ್ಲ ತನ್ನ ಜಯವು ಕಟ್ಟಿದ ಗಂಟೆಂದು ನಂಬಿದ್ದನು. ತನ್ನ ಇಪ್ಪತ್ತುಸಾವಿರ ಸೈನ್ಯವು ವೈರಿಯ ಹತ್ತುಸಹಸ್ರವನ್ನು ಸುನಾಯಾಸವಾಗಿ ಕೊಂದು ತನಗೆ ದಾರಿಬಿಡಿಸುವದೆಂಬ ನಂಬಿಕೆಯು ಸಂಪೂರ್ಣವಾಗಿತ್ತು.

ಒಂದಾವರ್ತಿ ತಲೆಯೆತ್ತಿ ಯುದ್ಧರಂಗದಕಡೆ ನೋಡಿದನು. ಅಲ್ಲಿನ ವ್ಯವಸ್ಥೆಯು ಭೀತಿಗೊಳಿಸುತ್ತಿತ್ತು. ಅಲ್ಪಸೈನಿಕರಾದರೂ ರತ್ನಗಿರಿಯವರ ಹೊಡೆತವೇ ಹೆಚ್ಚಾಗಿತ್ತು. ಅವರ ಉತ್ಸಾಹವು ಪ್ರಬಲವಾಗಿತ್ತು. ತನ್ನ ಸೈನ್ಯದಲ್ಲಿ ಮರಣ ಸಂಖ್ಯೆಯು ಏರಿಹೋಗು ತ್ತಿತ್ತು. ಹಗೆಗಳ ಸೈನ್ಯವು ಹೆಜ್ಜೆಯಮೇಲೆ ಹೆಜ್ಜೆಹಾಕಿಕೊಂಡು ಮುಂದಕ್ಕೆ ಬರುತ್ತಿತ್ತು. ಪೆನುಗೊಂಡೆಯವರು ಒಂದೊಂದುಹೆಜ್ಜೆ ಹಿಂದಕ್ಕೆ ಸರಿಯುತ್ತಿದ್ದರು. ಇಂಥಾ ಅಸಂಭವಕ್ಕೆ ಕಾರಣವೇನಿರಬ ಹುದೆಂದು ಬೆರಗಾಗುತ್ತಿದ್ದನು.

ರತ್ನಗಿರಿಯವರು ತಮಗೆ ಎರಡರಷ್ಟಿದ್ದ ಪೆನುಗೊಂಡೆಯವರನ್ನು ಹಿಮ್ಮೆಟ್ಟಿಸಲು ಅನೇಕ ಕಾರಣಗಳಿದ್ದವು. ರತ್ನಗಿರಿಯವರಕಡೆ ವೀರ ವಂಶೋತ್ಪನ್ನನೂ, ಸಮರಶಾಸ್ತ್ರನಿಪುಣನೂ ಆದ ನಾಯಕನಿದ್ದನು ಪೆನುಗೊಂಡೆಯವರಿಗೆ ಅಂಥಾ ಸೇನಾನಾಯಕನಿರಲಿಲ್ಲ. ನರಸನಾ ಯಕನು ಮೋಸದಲ್ಲಿ ಪ್ರವೀಣನಾಗಲಿ, ಯುದ್ಧದಲ್ಲಿ ಆತನಿಗೆ ನೈಪುಣ್ಯ ವಿರಲಿಲ್ಲ. ರತ್ನಗಿರಿ ಸೈನಿಕರು ಸ್ವಾಮಿಭಕ್ತರು. ತಮ್ಮ ಒಡೆಯನಿ ಗಾಗಿ ಕಡಿದಾಡಿ ಸಾಯಲು ಹಿಂಜರಿಯುತ್ತಿರಲಿಲ್ಲ. ಪೆನುಗೊಂಡೆಯ ಸೈನ್ಯಕ್ಕೆ ಸ್ವಾಮಿಭಕ್ತಿ ಇರಲಿಲ್ಲ. ಸ್ವಾಮಿಯೇ ಇಲ್ಲದವರಿಗೆ ಭಕ್ತಿ ಯೆಲ್ಲಿಂದ ಬರಬೇಕು? ನಿಜವಾದ ಸ್ವಾಮಿಯು ಹನುಮನಾಯಕನು. ಆತನನ್ನು ಕೊಂದ ವಂಚಕನಿಗಾಗಿ ಹೋರಾಡಬೇಕೆಂದರೆ ಅವರಿಗೆ ಉತ್ಸಾಹವೆಲ್ಲಿಯದು? ರತ್ನಗಿರಿಯವರಾದರೋ ತಾವು ಸತ್ಕಾರ್ಯ

ದೀಕ್ಷಿತರಾಗಿರುವೆವೆಂತಲೂ, ಲಾವಣ್ಯವತಿಯ ಮಾನರಕ್ಷಣೆಯಲ್ಲಿ ಹತರಾಗುವುದು ಉತ್ಕೃಷ್ಟಪೂಜಾಫಲವೆಂತಲೂ, ತಂದೆಗೆ ಸಮಾನನಾದ ರಾಮನಾಯಕನ ಋಣವನ್ನು ತೀರಿಸಲು ಅದು ಸುಸಮಯವೆಂತಲೂ, ಪರರ ಸೈನ್ಯದ ಮೇಲೆ ಬಿದ್ದು ಪರಾಕ್ರಮವನ್ನು ತೋರಿಸುತ್ತಿದ್ದರು. ಪೆನುಗೊಂಡೆಯ ಸೈನ್ಯದವರಿಗೆ ತಾವು ಮಾಡಲುಪಕ್ರಮಿಸಿದ ಕಾರ್ಯವು ಅತಿ ನೀಚವೆಂತಲೂ, ಧರ್ಮದೂರವಾದದ್ದೆಂತಲೂ ಲಾವಣ್ಯವತಿಯ ಮಾನಹರಣವು ಕ್ರೂರಕೃತ್ಯವೆಂತಲೂ, ಕಾಣಬಂತು. ಬೇರೆಮಾರ್ಗವಿಲ್ಲದೆ ಹೋದಕಾರಣ ಅವರು ನರಸನಾಯಕನ ಕಾಟಕ್ಕೆ ಯುದ್ಧಕ್ಕೆ ಬಂದಿದ್ದರು.

ಇಷ್ಟೇ ಅಲ್ಲ. ರತ್ನಗಿರಿ ಸೈನ್ಯವು ಯುದ್ಧಕ್ಕಂತಲೇ ಬಂದಿತ್ತು. ಕಾದಾಟಕ್ಕಾಗಿ ಹುಂಕರಿಸುತ್ತಿತ್ತು. ಒಂದುರಾತ್ರಿಯ ವಿಶ್ರಾಂತಿಯಿಂದ ಸರ್ವರೂ ಮಾರ್ಗಾಯಾಸವನ್ನು ತೀರಿಸಿಕೊಂಡಿದ್ದರು. ಮನಸಾರ ಭೋಜನಮಾಡಿ ಶಕ್ತಿಯುತರಾಗಿದ್ದರು. ನರಸನಾಯಕನ ಸೈನ್ಯಕ್ಕೆ ಯುದ್ಧದ ಹಂಬಲಿಕೆಯೇ ಇರಲಿಲ್ಲ. ಸಮರಸನ್ನಾಹವು ಅವರಲ್ಲಿರಲಿಲ್ಲ. ಮಾರ್ಗಾಯಾಸವು ತೀರಿರಲಿಲ್ಲ. ಕ್ಷುದ್ಬಾಧೆಯೊಂದು ಪೀಡಿಸುತ್ತಿದ್ದಿತು.

ಪ್ರಕೃತಿಯು ಸಹಾ ನರಸನಾಯಕನ ಮೇಲೆ ಸಿಟ್ಟಿಗೆದ್ದಂತೆ ಕಾಣುತ್ತಿತ್ತು. ಅವನ ದುಷ್ಕಾರ್ಯವನ್ನು ಯಾರು ತಾನೇ ಮನ್ನಿಸಬಲ್ಲರು? ಸೂರ್ಯಾತಪವು ಹೆಚ್ಚಾಗಿ ನಿರಶನರಾಗಿ ಬಾಯಾರಿಕೆಯಿಂದ ಬಿದ್ದುಹೋಗುತ್ತಿದ್ದ ಸೈನಿಕರನ್ನು ಮತ್ತಿಷ್ಟು ಬಳಲಿಸುತ್ತಿತ್ತು. ನರಸನಾಯಕನ ಪ್ರೋತ್ಸಾಹವು ಕೆಲಸಕ್ಕೆಬಾರದೆ ಹೋಯಿತು.

ಬಿಸಿಲಿನ ಹೊಡತವು ಕಮ್ಮಿಯಾಯ್ತೋಯಿಲ್ಲವೋ. ಆಕಾಶವು ಮೇಘಮಯವಾಯಿತು. ಬಿರುಗಾಳಿಯು ಪೆನುಗೊಂಡೆಯವರಿಗೆ ಎದುರಾಗಿ ಬೀಸಹತ್ತಿತು. ಕೆಂಧೂಳಿಯು ಸೈನ್ಯವನ್ನೆಲ್ಲಾ ಆವರಿಸಿಕೊಂಡಿತು. ಉಭಯಪಾರ್ಶ್ವದವರಿಗೂ ಒಬ್ಬರವೋರೆ ಒಬ್ಬರಿಗೆ

ಕ್ಷೀಣದಂತಾಯಿತು. ಆ ಘಾಳಿಯ ಹೊಡತವು ಪೆನುಗೊಂಡೆಯವರಿಗೆ ಹೆಚ್ಚಾಗಿತ್ತು. ಭೀಮನಾಯಕನು ಒಂದೇಸಮನಾಗಿ ಯುದ್ಧಮಾಡು ತ್ತಿದ್ದನು. ರತ್ನಗಿರಿಯ ಸೈನ್ಯದ ಉತ್ಸಾಹವು ತಗ್ಗಲಿಲ್ಲ ಅವರಿಗೆ ಯುದ್ಧದ ಆಯಾಸವು ಕಾಣಲೇಯಿಲ್ಲ. ಮುಂದಿಟ್ಟ ಹೆಜ್ಜೆ ಹಿಂದಕ್ಕೆ ತೆಗೆಯದೆ ಅವರು ಸಮರಗೈಯುತ್ತಿದ್ದರು.

ನರಸನಾಯನು ಕಂಗೆಟ್ಟು ನೋಡಿದನು. ನಿಜಸ್ಥಿತಿಯು ಮನ ಸ್ಸಿಗೆ ತಟ್ಟಿತು ತಾನೊಂದು ಯೋಚಿಸಿದ್ದನು, ದೈವವು ಬೇರೊಂದು ನೆನೆದಿತ್ತು. ಆ ದಿನ ಸಾಯಂಕಾಲಕ್ಕೆ ಪೆನುಗೊಂಡೆಯನ್ನು ಸೇರುವ ಆಶೆಯು ದೂರವಾಯಿತು. ಮಾರನೆಯ ದಿವಸನಾದರೂ ಸೇರಬೇ ಕೆಂಬ ಯೋಚನೆಯನ್ನು ಮಾಡಿದನು. ಹೋರಾಟದಿಂದ ತನ್ನ ಕಾರ್ಯವು ಕೈಗೂಡುವಂತೆ ತೋರಲಿಲ್ಲ. ಸೈನ್ಯದವರಿಗೆ ಯುದ್ಧವನ್ನು ನಿಲ್ಲಿಸಬೇಕೆಂದು ಆಜ್ಞೆಮಾಡಿದನು. ಅವರಿಗೆ ಅದೇ ಬೇಕಾಗಿತ್ತು. ಸರ್ವರೂ ಒಮ್ಮೆಯೇ ಆಯುಧಗಳನ್ನುನೆಲಕ್ಕೆ ಹಾಕಿದರು. ಭೀಮ ನಾಯಕನು ಅದನ್ನು ನೋಡಿ ಆಶ್ಚರ್ಯಪಟ್ಟನು ನಿರಾಯುಧರಾದ ವರ ಮೇಲೆ ಕೈಹಾಕುವದು ವೀರಧರ್ಮವಲ್ಲವೆಂದು ತನ್ನವರಿಗೆ ಯುದ್ಧವನ್ನು ನಿಲ್ಲಿಸಿರೆಂದು ಆಜ್ಞೆಮಾಡಿದನು. ನರಸನಾಯಕನು ಸಂಧಿಗೆ ಒಡಂಬಟ್ಟುಯಿರುವೆನೆಂತ ಭೀಮನಾಯಕನಿಗೆ ವರ್ತಮಾನ ವನ್ನು ಕಳುಹಿಸಿನು. ಸಂಧಿಯ ಷರತುಗಳೇನೋ ತಿಳುಹಿಸಲಿಲ್ಲ. ಹಿಂದಿರುಗಿ ಪೆನುಗೊಂಡೆಗೆ ಹೋಗುವೆನೆಂದು ಮಾತುಕೊಡಲಿಲ್ಲ. ಅದರಿಂದ ಭೀಮನಾಯಕನಿಗೇನೂ ಕೊರತೆ ಕಾಣಲಿಲ್ಲ. ನರಸನಾ ಯಕನು ಮುಂದಕ್ಕೆ ಹೋಗದೇನಿಂತರೆ ಸಾಕೆಂತಲೂ, ರಾಮನಾಯ ಕನ ವಿವಾಹವು ನಿರ್ವಿಘ್ನವಾಗಿ ನಡೆಯುವುದೆಂತಲೂಯೋಚಿಸಿ ಸುಮ್ಮನಿದ್ದನು.

---

# ೭ನೆಯ ಪ್ರಕರಣ

ನರಸನಾಯಕನು ಮಾಯದ ಮುಟ್ಟಿ. ಕಪಟದ ಗಣಿ. ಅವನು ಸಂಧಿನಡೆಯಿಸುವವನಂತೆ ನಟನೆಮಾಡಿದನಾಗಲಿ, ಲಾವಣ್ಯಾವತಿಯ ಮೇಲೆ ಮರುಳು ಬಿಟ್ಟಿರಲಿಲ್ಲ. ಹಗೆಯುನ ಸೈನ್ಯವು ಆವೇಶದಿಂದ ಯುದ್ಧಮಾಡುತ್ತಿತ್ತು. ತನ್ನ ಬಲದಲ್ಲಿ ಅರ್ಧ ನಾಶವಾಗಿಹೋಗಿತ್ತು. ಆ ದಿನ ತನ್ನವರಿಗೆ ವಿಶ್ರಾಂತಿ ಕೊಡದೆ ಯುದ್ಧಮಾಡಿದರೆ ತನಗೆ ಸೋಲು ಸಿದ್ಧವೆಂದು ತಿಳಿದು, ಈ ಉಪಾಯವನ್ನು ಹುಡುಕಿದ್ದನು ಯುದ್ಧಾನಂತರ ನಿಂತ ಸೈನಿಕರಿಗೆ ಬೆಂಬಲವಾಗಿ ಪೆನುಗೊಂಡೆಯಿಂದ ಮತ್ತೆ ಹತ್ತುಸಾವಿರ ಸೈನ್ಯವು ಬರಬೇಕೆಂದು ಚಾರರೊಡನೆ ಹೇಳಿ ಕಳುಹಿಸಿದನು ಮೂರನೆಯ ದಿನ ಭೀಮನಾಯಕನನ್ನು ಗೆಲ್ಲಬಹು ದೆಂಬ ಧೈರ್ಯವಿತ್ತು

ರತ್ನಗಿರಿಯ ಅಲ್ಪ ಸೈನ್ಯದಲ್ಲಿ ಕಾಲುಭಾಗ ನವೆದು ಹೋಗಿತ್ತು. ಮಿಕ್ಕವರು ಯುದ್ಧದ ಶ್ರಮೆಯಿಂದ ಭೋಜನಾನಂತರ ಮೈಮರೆದು ನಿದ್ರೆಮಾಡುತ್ತಿದ್ದರು ರಾತ್ರಿಸಮಯದಲ್ಲಿ ಮೋಸಗೊಳಿಸಿ ನರಸನಾಯಕನು, ನಿದ್ರಾವಸ್ಥೆಯಲ್ಲಿದ್ದ ತನ್ನ ಸೈನಿಕರ ಮೇಲೆ ಬಿದ್ದಾನೆಂಬ ಭಯದಿಂದ ಭೀಮನಾಯಕನು ಅವರಿಗೆ ಕಾವಲಿದ್ದನು. ಆತಗೆ ಸ್ವಾಮಿಕಾರ್ಯವನ್ನು ಕೈಗೂಡಿಸಿದೆನೆಂಬ ಹಿಗ್ಗು. "ನಾಳೆ ವಿವಾಹವು ಮುಗಿಯುತ್ತದೆ ಅದಕ್ಕೆ ಮುಂಚೆ ನರಸನಾಯಕನನ್ನು ಎಂತೂ ಮುಂದಕ್ಕೆ ಬಿಡುವುದಿಲ್ಲ. ಕೈಮೀರಿಹೋದ ಕಾರ್ಯಕ್ಕೆ ಅವನು ತಾನೇ ಯಾತಕ್ಕೆ ವೃಥಾ ಪ್ರಯಾಸಪಡುವನು. ಬುದ್ಧಿತಂದು ಕೊಂಡು ಓಡಿಹೋಗುತ್ತಾನೆ. ನಾನು ರಾಮನಾಯಕನಲ್ಲಿಗೆ ಹೋಗಬಹುದು.' ಹೀಗೆಂದು ಆತನು ಯೋಚಿಸುತ್ತಿರಲು ಇಬ್ಬರು ಚಾರರು ಬಂದು ಆತನ ಎದುರಿನಲ್ಲಿ ನಿಂತರು. ಆ ನಿಶೀಸಮಯದಲ್ಲಿ ಅವರು ಬಂದದ್ದು ನೋಡಿ ನೋಜಿಗಪಡುತ್ತಾ "ಎಲೋ, ಚಾರರೇ! ನೀವು ಯಾರು? ಈ ಸಮಯದಲ್ಲಿ ಇಲ್ಲಿಗೆ ಬರಲು ಕಾರಣವೇನು?" ಎಂದು ಕೇಳಿದನು. ಆದಕ್ಕಾಚಾರರು ತಾವು ನರಸನಾಯಕನ ಕಡೆ

ಯುವರೆಂತಲೂ, ಆತನು ಒಂದು ಪತ್ರವನ್ನು ಕಳುಹಿಸಿರುವನೆಂತಲೂ ಬಿನ್ನಹಮಾಡಿ ಆ ಪತ್ರವನ್ನು ಕೊಟ್ಟರು. ಅದನ್ನು ಆತನು ಈ ರೀತಿ ಪಠಿಸಿದನು.

ಶ್ರೀ ರತ್ನಗಿರಿ ರಾಜವಂಶಶಿಖಾಮಣಿಯಾದ ಭೀಮನಾಯಕರ ವರಿಗೆ. ತಮ್ಮ ಕ್ಷೇಮವನ್ನು ಮೈತ್ರಿಯನ್ನು ಬಯಸಿ ಪೆನುಗೊಂಡೆಯ ನರಸನಾಯಕನು ಮಾಡುವ ವಿಜ್ಞಾಪನೆ ಏನೆಂದರೆ.—

ನಿನ್ನಿನ ದಿನದ ಘೋರ ಸಂಗ್ರಾಮದಲ್ಲಾದ ಪ್ರಾಣನಷ್ಟವು ಇಬ್ಬರೂ ಕಣ್ಣಾರ ನೋಡಿದ ವಿಷಯವೇ. ಅಂಥಾ ಪ್ರಳಯವು ಯಾತಕ್ಕಾಯಿತೆಂಬುವದು ಯೋಚಿಸಲು ಅವಕಾಶವೇಯಿಲ್ಲದೆಹೋಯಿತು. ಈಗಲಾದರೂ ಕಣ್ದೆರೆದು ತರ್ಕಮಾಡೋಣ.

ಲಾವಣ್ಯವತಿಯ ಅನುಮತಿಯನ್ನು ಪಡೆದು ವಿವಾಹ ಸಂಭ್ರಮದಿಂದ ನಾನು ನಿಡಗಲ್ಲಿಗೆ ಪ್ರಯಾಣ ಮಾಡಿದೆನು. ಸರಿರಾಜನಾದ ರಾಮನಾಯಕನು, ನಾನು ಮದುಮೆಯಾಗಲೆಣಿಸಿದ ತರುಣಿಯನ್ನು ತಾನು ಕೋರಿ ಬಂದಿರುವನು. ಕದನಕ್ಕೆ ಕಾರಣಭೂತನು ತಾನೇ ಯೆಂಬುವುದರಲ್ಲಿ ಸಂಶಯವಿಲ್ಲ. ಸಂಗ್ರಾಮವು ಘೋರವಾಗಿ ಜರಿಗಿತು. ಅಸಂಖ್ಯಾತರಾದ ಸೈನಿಕರು ಲಯವಾದರು. ಇದರಿಂದ ನನಗೆ ಬಂದಲಾಭವೇನು? ನೀನನುಭವಿಸಿದ ಸುಖವಾದರೂ ಏನು? ನಮ್ಮಿಬ್ಬರ ಹೊಡೆದಾಟದಲ್ಲಿ ಮೂರನೆಯವನಾದ ರಾಮನಾಯಕನಿಗೆ ಲಾವಣ್ಯವತಿಯು ಲಭಿಸಿದಳು. ಅದಕ್ಕಿಂತಲೂ ಹೆಚ್ಚಿನ ಲಾಭವು ಆತನು ಮತ್ತೊಂದು ಬಯಸಿರುವನು. ಅದೇನೆಂದು ಕೇಳುವೆಯಾ? ನಿನ್ನ ಸಾವು! ರಾಜವಂಶಸಂಜಾತನೂ, ಭುಜಬಲೋಪೇತನೂ, ಅಸಮಾನ ಪೌರುಷವಂತನೂ ಆದ ನೀನು ಆತನಿಗೆ ಸದಾ ಮನಸಿನ ಮುಳ್ಳಾಗಿರುವೆ. ನಿನ್ನನ್ನು ಯಾವವಿಧವಾಗಿಯಾದರೂ ಕಡೆಗಾಣಿಸುವವರೆಗೂ ಆತನಿಗೆ ನಿದ್ರೆಬಾರದು. ನ್ಯಾಯಸಮ್ಮತವಾಗಿ ರಾಜ್ಯವು ನಿನ್ನದು. ಯಾರೋ ಎಂದೋ ಕೊಟ್ಟ ಬರಿಯ ಮಾತಿನ

ಬಲದಿಂದ ಅದು ರಾಮನಾಯಕನಿಗೆ ಸೇರಿತು. ನೀನು ಬೇಕೆಂದರೆ ಸಹಾಯಕ್ಕೆ ಬರುವ ಪಾಳೆಯಗಾರರು ಅನೇಕರಿದ್ದಾರೆ. ಅದು ರಾಮ ನಾಯಕನಿಗೆ ಗೊತ್ತುಂಟು. ನಿನ್ನನ್ನು ಕಡೆಗಾಣಿಸಲು ಈ ಉಪಾಯ ವನ್ನು ಹುಡುಕಿರುವನು. ನೀನು ಇಷ್ಟುಮಾತ್ರ ಆಲೋಚನೆ ಮಾಡದೇ ಹೋದೆ.

ಅಯ್ಯೋ! ಭೀಮನಾಯಕಾ! ನಿನ್ನ ಬುದ್ಧಿಮಾಂದ್ಯಕ್ಕೆ ಅಳ ಬೇಕೆ? ನನಗಬೇಕೆ? ನಾನು ನಿನಗೆ ಮಾಡಿರುವ ಅನ್ಯಾಯವಾ ದರೂ ಯೇನು? ನಿನ್ನ ಹಿತವನ್ನು ಕೋರಿ ಇಲ್ಲಿಂದಲ್ಲಿಗೆ ಪತ್ರವನ್ನು ಬರೆದು ಕಳುಹಿಸಿದೆನು. ಅದರ ಪ್ರತಿಫಲವಾಗಿ ನನ್ನಮೇಲೆ ಕದನಕ್ಕೆ ಬಂದಿರುವೆಯಾ? ರೋಗಿಗೆ ಔಷಧವು ರುಚಿಸದಂತೆ ನನ್ನ ಮಾತುಗಳು ನಿನಗೆ ವಿಷವಾದವು. ನೀನೇನು ಮಾಡೀಯಿ. ನಿನಗೆ ಮೋಂಕುಮು ಚ್ಚಿದೆ. ಈಗಲಾದರೂ ಕಣ್ದೆರೆದು ನೋಡು. ನಿನ್ನ ಶ್ರೇಯಾಭಿಲಾಷಿ ಯಾರೋ ಗ್ರಹಿಸು. ರಾಮನಾಯಕನು ನಿನ್ನ ಕ್ಷೇಮವನ್ನು ಕೋರು ವವನಲ್ಲ. ನಿನ್ನನ್ನು ನಾಮಾವಶಿಷ್ಟನನ್ನಾಗಿ ಮಾಡದೇ ಬಿಡನು. ನಿನ್ನ ಶುಭವನ್ನು ಬಯಸುವನು ನಾನು

ಇದುವರಿವಿಗೂ ನಾನು ಪುತ್ರಹೀನನು. ಲಾವಣ್ಯವತಿಯನ್ನು ಕೂಡಿ ವಂಶವನ್ನು ವೃದ್ಧಿಗೊಳಿಸಬೇಕೆಂಬ ಆಶೆಯು ಇದ್ದಿತಾಗಲಿ. ಅಕೆಯ ಸೌಂದರ್ಯಕ್ಕೆ ಮರುಳಾಗಿ ಬಲವಂತಪಡಿಸಲಿಲ್ಲ. ಮನಃ ಪೂರ್ವಕ ತಾನೇ ನನ್ನನ್ನು ಮದುವೆಯಾಗುವೆನೆಂದು ಮಾತುಕೊಟ್ಟಿ ದ್ದಳು. ಆ ಆಶೆಯು ಈ ದಿನಕ್ಕೆ ತೀರಿತು. ದಾರಿಗಳ್ಳನಾದ ರಾಮ ನಾಯಕನು ನಾಳಿನದಿನ ಅವಳನ್ನು ಮದುವೆಯಾಗುವನು. ಅವನ ಮೇಲಿನ ಕೋಪವು ಹೆಚ್ಚುತ್ತಿದೆ. ಅವನನ್ನು ಸದೆದು ನಿನ್ನನ್ನು ರತ್ನ ಗಿರಿಯ ಸಿಂಹಾಸನದ ಮೇಲೆ ಕುಳ್ಳಿರಿಸಲು ಕಂಕಣಬದ್ಧನಾಗಿರುವೆನು.

ಅಷ್ಟೊಂದು ಪ್ರೇಮವು ನಿನ್ನಮೇಲಿರಲು ಕಾರಣವು ಹೇಳು ತ್ತೇನೆ; ಕೇಳು. ಸಮಸ್ತರಾಜ್ಯಗಳನ್ನೂ ಹುಡುಕಿದೆನು. ಬಲಪರಾ

ಕ್ರಮಗಳಲ್ಲಿಯೂ, ವಯೋವಿಲಾಸಗಳಲ್ಲಿಯೂ, ರೂಪಲಾವಣ್ಯಗಳ ಲ್ಲಿಯೂ, ನನ್ನ ಏಕಪುತ್ರಿಯಾದ ಗಂಗಾಂಬೆಗೆ ತಕ್ಕವರನು ನಿನ್ನ ಬಿಟ್ಟರೆ ಬೇರೆಯಿಲ್ಲ. ಮೊದಲೇ ನಾನೀಪ್ರಯತ್ನವನ್ನು ಮಾಡಬೇ ಕೆಂದಿದ್ದೆನು. ಆದರೆ ರಾಮನಾಯಕನು ಅದನ್ನು ಸಾಗಲೀಸುವದಿಲ್ಲ ವೆಂದು ನಾನು ಬಲ್ಲೆನು. ಸಾಮವಿಂದ ನಿನ್ನನ್ನು ತಿರುಗಿಸಿಕೋಬೇ ಕೆಂದೇ ನಿನಗೆ ಪತ್ರವನ್ನು ಬರೆದು ಕಳುಹಿಸಿದ್ದೆನು. ಅದು ನಿನ್ನ ವಿವಾಹಕ್ಕೆ ಮುಂಚಿತವೇ ನಿನಗೆ ಸೇರಬೇಕಾಗಿತ್ತು. ಚಾರನು ಅಜಾ ಗ್ರತೆಯಿಂದ ವಿವಾಹಾನಂತರ ನಿನಗೆ ಕೊಟ್ಟಂತೆ ತಿಳಿದು ಬಂತು. ನೀನಾದರೋ ನನ್ನನ್ನು ಓಯ್ಯಾಳಿಸಿಬಿಟ್ಟೆ. ಆದರೂ ಚಿಂತೆಯಿಲ್ಲ. ಹೆಣ್ಣು ಹಡೆದವನಾದ್ದರಿಂದ, ನನ್ನನ್ನು ನೀನು ಎಷ್ಟು ಹಿಯ್ಯಾಳಿದರೂ. ನನಗೆ ನೀನು ಎಷ್ಟು ದ್ರೋಹಚಿಂತನೆ ಮಾಡಿದರೂ, ನಿನ್ನನ್ನೇ ಆಶ್ರ ಯಿಸಬೇಕಾಗಿದೆ. ಆಶ್ರಯಿಸುತ್ತಿದ್ದೇನೆ.

ನನ್ನ ಮನವಿಯನ್ನು ಮನ್ನಿಸು. ನಾನು ಹೇಳಿದ ಮಾತುಗಳನ್ನು ಲಾಲಿಸು. ನನ್ನ ಬುದ್ಧಿಮಾತುಗಳನ್ನು ಪಾಲಿಸು. ನಿನ್ನ ಸತೀಮ ಣಿಯು ಸ್ವಹಸ್ತದಿಂದ ಮೃತ್ಯುವಿಗೆ ತುತ್ತಾದಳೆಂದು ಕೇಳಿರುವೆನು. ನೀನು ಒಂಟಿಗನಾಗಿ ಇರಲಾರೆ. ರತ್ನಗಿರಿಗೆ ಪ್ರಯಾಣಮಾಡೋಣ. ನಾನು ನಿನ್ನೊಡನೆ ಬಂದು, ರಾಜ್ಯಕ್ಕೆ ನಿನ್ನನ್ನು ಪಟ್ಟಾಭಿಷಿಕ್ತನನ್ನು ಮಾಡುವೆನು ಮದುವೆಯ ಹಿಗ್ಗಿನಿಂದ ಹಿಂದಿರುಗಿ ಬರುವ ರಾಮ ನಾಯಕನನ್ನು ಮಧ್ಯಮಾರ್ಗದಲ್ಲಿಯೇ ನನ್ನವರಿಂದ ಕೊಲ್ಲಿಸಿಬಿಡು ವೆನು. ನನ್ನ ಮುದ್ದು ಮಗಳನ್ನು ರತ್ನಗಿರಿಗೆ ಕರೆಸಿಕೊಂಡು ನಿನಗೆ ಮದುವೆಮಾಡುವೆನು ನೀನು ರತ್ನಗಿರಿಗೆ ಒಂದಕ್ಕೆ ಅಲ್ಲದೇ ನಿಡಗಲ್ಲು, ಪೆನುಗೊಂಡೆಗಳಿಗೆ ಸಹಾ ಒಡೆಯನಾಗುವೆ.

ಮೂರ್ಖತನದಿಂದ ಒಂದೇಪಟ್ಟು ಹಿಡಿದರೆ ನಿನಗೆ ಸುಖವಿಲ್ಲ. ರಾಜನೀತಿಯನ್ನು ಸರಿಯಾಗಿ ತಿಳಿದವನಾದರೆ, ಇದುವರಿಗೂ ನೀನು ರಾಮನಾಯಕನ ಸೇವೆಯಲ್ಲಿ ಇರುತ್ತಿರಲಿಲ್ಲ. ದೊರೆಯು ಒಬ್ಬನೆಂ ಬುವದು ಏನು ಮಾತು ? ಬಲವಂತನು ಯಾರೋ ಧರಣೀರಾಜ್ಯವು

ಅವನದು. ಹೋರಾಟದಲ್ಲಿ ರಾಮನಾಯಕನನ್ನು ಗೆದ್ದರೆ ನೀನೇ ಬಲವಂತನು. ಆಗ ಘರಣಿಯೆಲ್ಲವು ನಿನ್ನದು. ದೊರೆಯು ನೀನು. ಇನ್ನು ರತ್ನಗಿರಿಯವರ ವಂಶದ ವಿಷಯ ತರ್ಕಿಸೋಣ. ರತ್ನಗಿರಿಯ ಸಿಂಹಾಸನವು ನಿಮ್ಮವರದು. ರಾಮನಾಯಕನ ಹಿರಿಯರು ಅದನ್ನು ಮೋಸದಿಂದ ಕಿತ್ತುಕೊಂಡರು. ಈಗ ಅದು ನಿನ್ನದು. ಸಿಹಿ ಮಾತುಗಳಿಗೆ ರಾಮನಾಯಕನು ಅದನ್ನು ನಿನಗೆ ಬಿಡುವಂತಿಲ್ಲ. ನನ್ನ ಮಾತು ಕೇಳು. ಸುಖವನ್ನು ಪಡೆಯುವ ಮಾರ್ಗವನ್ನು ನೋಡು.

ನಿನ್ನ ಶ್ರೇಯಾಭಿಲಾಷಿ,

**ನರಸನಾಯಕ.**

ಭೀಮನಾಯಕನು ಆ ಪತ್ರವನ್ನು ಅನೇಕಾವರ್ತಿ ಓದಿಕೊಂಡನು, ದೀರ್ಘಾಲೋಚನೆಯನ್ನು ಮಾಡಿದನು. ನರಸನಾಯಕನ ಒಂದೊಂದು ವಾಕ್ಯವೂ ಆತನನ್ನು ಭ್ರಮೆಗೊಳಿಸುತ್ತಿತ್ತು. ಆಶೆಯೆಂಬ ಪಿಶಾಚವು ಆತನ ಮನಸ್ಸಿನಲ್ಲಿ ತಾಂಡವವಾಡುತ್ತಿತ್ತು. ನರಸನಾಯಕನ ಮಾತಿನಲ್ಲಿ ವಿಶ್ವಾಸವು ಹೆಚ್ಚಾಯಿತು. ಮೂರನೆಯ ದಿವಸ ಪುನಹ ಯುದ್ಧವಾದರೆ ಜಯವೋ ಅಪಜಯವೋ ಎಂಬ ಭೀತಿಯು ಉತ್ಪನ್ನವಾಯಿತು ವೃಥಾ ಮೃತ್ಯುವಿಗೆ ತುತ್ತಾಗಬೇಕಾಯಿತೆಂಬ ಚಿಂತೆಯು ಹತ್ತಿತು. ಕೆಲಕಾಲವಾದರೂ ರಾಜನೆನಿಸಿಕೊಂಡು ಬಾಳಬೇಕೆಂಬ ಆಶೆಯು ಹುಟ್ಟಿತು. ವಿಷಯಾಸಕ್ತನಾದ ಆತಗೆ ಗಂಗಾಂಬೆಯ ನಾಮವು ಮರುಳುಮಂತ್ರವಾಗಿತ್ತು. ಮೋಹನಾಸ್ತ್ರವಾಗಿತ್ತು. ಅದ್ವಿತೀಯನಾಗಿ ಮೆರೆಯುತ್ತಿದ್ದ ನರಸನಾಯಕನಿಗೆ ಅಳಿಯನಾಗಿ, ಸಿಂಹಾಸನಾರೂಢನಾಗಿ, ಗಂಗಾಂಬೆಯೊಡನೆ ಸುಖವನ್ನನುಭವಿಸಲು ನಿಶ್ಚಯಿಸಿಕೊಂಡನು. ರಾಮನಾಯಕನಿಗೆ ದ್ರೋಹಿಯಾದನು ರಂಗನಾಯಕಿಯ ಕೊನೆಯ ಸಂದೇಶವನ್ನು ನಡಿಸದೇ ಹೋದನು. ತನ್ನ ನಿಶ್ಚಿತಾಭಿಪ್ರಾಯವನ್ನು ಲೇಖೆಯ ಮೂಲಕ ನರಸನಾಯಕನಿಗೆ ತಿಳುಹಿಸಲೆಣಿಸಿ ಈರೀತಿ ಪ್ರತ್ಯುತ್ತರವನ್ನು ಬರೆದನು.

" ಶ್ರೀ ಪೆನುಗೊಂಡೆಯ ಪ್ರಭುವಾದ ಶ್ರೀ ನರಸನಾಯಕರವರ ದಿವ್ಯಸನ್ನಿಧಿಗೆ. ಭೀಮನಾಯಕನು ಪ್ರಣಾಮಪೂರ್ವಕ ಮಾಡುವ ವಿಜ್ಞಾಪನೆ.

ತಾವು ನನ್ನಲ್ಲಿ ಸಂಪೂರ್ಣಾಭಿಮಾನವಿಟ್ಟು ಅನುಗ್ರಹಿಸಿದ ಬುದ್ಧಿಪತ್ರವನ್ನು ತುದಿಮೊದಲು ನೋಡಿದೆನು. ಅದರ ಅಭಿಪ್ರಾಯ ವನ್ನು ಗ್ರಹಿಸಿದೆನು. ನಿಮಗೆ ನಾನು ಆಜನ್ಮ ಋಣಿಯಾಗಿರುವೆನು. ತಮ್ಮ ಆಜ್ಞೆಯನ್ನು ಶಿರದಲ್ಲಿ ಧರಿಸಿ ನಡೆದುಕೊಳ್ಳಲು ಸಿದ್ಧನಾಗಿರು ವೆನು. ನೀವು ಇಷ್ಟೊಂದು ಸುಸ್ವಭಾವವುಳ್ಳವರೆಂದು ತಿಳಿಯದೆ ಹೋದೆನು. ನಿಮ್ಮನ್ನು ದೂಷಿಸುತ್ತಲಿದ್ದ ಚಾಡಿಕೋರರ ಮಾತು ಗಳನ್ನು ಸದಾ ಕೇಳುತ್ತಿದ್ದೆನಾಗಲಿ, ನಿಮ್ಮ ಔದಾರ್ಯವು ನನಗೆ ಯಾವಾಗಲೂ ಕಿವಿಗೆ ಬೀಳಲಿಲ್ಲ. ಇಷ್ಟಕ್ಕೆ ಮುಂಚೆಯೇ ನನಗೆ ಹಿತಬೋಧನೆಯನ್ನು ಮಾಡುತ್ತ ಬಂದಿರಿ. ಅದನ್ನು ಸ್ವೀಕರಿಸದೇ ಹೋದದ್ದಲ್ಲದೇ ನಿಮಗೆ ಎಷ್ಟೋ ಕೇಡೆಣಿಸಿದೆನು. ಎದುರುಬಿದ್ದು ನಿಮ್ಮ ಸೈನಿಕರನ್ನನೇಕರನ್ನು ಕೊಲ್ಲಿಸಿದೆನು. ನಿಮ್ಮ ಕಾರ್ಯಕ್ಕೆ ಅಂತರಾಯ ಮಾಡಿದೆನು. ಲಗ್ನಕ್ಕಾಗಿ ಹೋಗುತ್ತಲಿದ್ದ ನಿಮ್ಮ ದಾರಿಯನ್ನು ಅಡ್ಡಗಟ್ಟಿ, ಆಶಾಭಂಗವನ್ನುಂಟುಮಾಡಿ ಅಪರಾಧಿ ಯಾದೆನು. ನಿಮ್ಮ ವಂಶವೃದ್ಧಿಗೆ ಕಂಟಕನಾದೆನು. ತಂದೆಯು ಮಗನ ತಪ್ಪುಗಳನ್ನು ಕ್ಷಮಿಸುವಂತೆ, ನನ್ನ ಅಪರಾಧಗಳನ್ನು ಕ್ಷಮಿಸು ವೆವೆಂದು ಅಭಯವಾಕ್ಯವನ್ನು ದಯಪಾಲಿಸಿದರೆ, ನಿಮ್ಮ ಪಾದ ಸನ್ನಿಧಿಗೆ ಬರುವೆನು.

ತಮ್ಮ ಪಾದಸೇವಕ,
**ಭೀಮನಾಯಕ.**

ಪ್ರಿಯವಾಚಕರೇ? ಅಸಂತೃಪ್ತಿಯಿಂದ ಅಕಾಲಮರಣವನ್ನು ಹೊಂದಿದವರ ಆತ್ಮವು, ಪರಲೋಕಕ್ಕೆ ಹೋಗದೆ, ತಮ್ಮ ವಾಂಛಿತ ಕಾರ್ಯವು ಪೂರೈಸುವವರೆಗೂ ಭೂಲೋಕದಲ್ಲಿಯೇ ಹಾರಾಡುತ್ತ ಭೂತನಾಮದಿಂದ ನಾನಾಕಾರ್ಯಗಳನ್ನು ಕೈಗೂಡಿಸಿಕೊಳ್ಳುವುದೆಂಬ ಹಿರಿಯರ ವಾಕ್ಯವು ಒಂದುಂಟು. ನಾಗರಿಕತೆಯು, ನಾನಾ ಶಾಸ್ತ್ರ

ಪರಿಶೋಧನೆಯೂ, ಪ್ರಬಲವಾದ ಈ ಯುಗದಲ್ಲಿ ಈ ವಾಕ್ಯವನ್ನು ನಂಬದ ಯುವಕರಿರಬಹುದು. ಆದರೆ ಇದಕ್ಕೆ ಏನು ಹೇಳುವಿರಿ ?

ರಂಗನಾಯಕಿಯು ಓರ್ವ ಪಾಳೆಯಗಾರನ ಗರ್ಭಜಾತೆಯು. ವೀರಪುಂಗವನಾದ ಭೀಮನಾಯಕನನ್ನು ಕೈ ಹಿಡಿದಿದ್ದಳು. ಸಕಲ ಸಂಪತ್ತು ತನಗಿತ್ತು. ಆಕೆಯು ಮದುವೆಯಾಗಿ ಶ್ವಶೃಗೃಹವನ್ನು ಹೊಕ್ಕ ಮೂರು ದಿನಗಳಲ್ಲಿಯೇ ಸ್ವಹಸ್ತದಿಂದ ಮರಣವನ್ನೈದಿದಳು. ಅದು ಅಕಾಲಮರಣವಲ್ಲದೆ ಸಕಾಲವಾದದ್ದೆಂದಿಗೂ ಅಲ್ಲ. ಆಕೆಯ ಕೊನೆಯ ಕೋರಿಕೆಯು ನೆರವೇರಿರಲಿಲ್ಲ. ತನ್ನ ಪತಿಯಾದ ಭೀಮ ನಾಯಕನು ಕ್ಷಣಭಂಗುರವಾದ ಸುಖಗಳನ್ನು ತ್ಯಜಿಸಿ, ಸ್ವಾಮಿಕಾರ್ಯ ಧುರಂಧರನಾಗಿ, ಸರಸನಾಯಕನ ದಾರಿಯನ್ನು ಅಡ್ಡಗಟ್ಟಿ, ಲಾವಣ್ಯಾವತಿಯ ಮಾನರಕ್ಷಣೆ ಮಾಡಲೆಂದು ಪ್ರಾಣವನ್ನು ತೃಣಪ್ರಾಯಮಾಡಿ, ಸ್ವಹಸ್ತದಿಂದ ಶಿರವನ್ನು ತರಿದು ಬಿಸುಟಿದ್ದಳು. ಆಕೆಯ ಆತ್ಮವು ಭೀಮನಾಯಕನು ಏನು ಗೈಯ್ಯುವನೋ ಎಂದು ಹಿಂಬಾಲಿಸುತ್ತ ಇತ್ತಾಗಬಹುದು.

ಭೀಮನಾಯಕನು ಲೇಖೆಯನ್ನು ಮುಗಿಸಿ ತಲೆಯನ್ನು ಮೇಲಕ್ಕೆತ್ತಿ ನೋಡಿದನು ಅರ್ಧರಾತ್ರಿಯ ಸಮಯ ಸಮೀಪದಲ್ಲಿ ಯಾರೂ ಇರಲಿಲ್ಲ. ಓರ್ವನೇ. ಅಂಥಾ ನಿರ್ಜನ ಸಮಯದಲ್ಲಿ ಪ್ರಳಯ ಕಾಲದ ದುರ್ಗಿಯಂತೆ, ಮೂರ್ತೀಭವಿಸಿದ ರೌದ್ರದಂತೆ, ಭೀಮ ನಾಯಕನ ಎದುರಿನಲ್ಲಿ ಕಣ್ಣಿಂದ ಕಿಡಿಗಳನ್ನು ಸುರಿಸುತ್ತಾ ನಿಂತಿರುವ ಈ ವೀರಮೂರ್ತಿಯು ದಾರು ? ಭೀಮನಾಯಕನು ಒಮ್ಮೆ ದೃಷ್ಟಿಸಿ ನೋಡಿದನು. ಭಯದಿಂದಲೋ, ಆಶ್ಚರ್ಯದಿಂದಲೋ, ನಾಚಿಕೆಯಿಂದಲೋ, ತಲೆಬಾಗಿಸಿ ಕುಳಿತನು. ಅವನ ಕರ್ಣಪುಟಗಳನ್ನು ಭೇದಿಸುತ್ತಾ ಈ ವಾಕ್ಯಗಳು ಕೇಳಬಂದವು. "ಛೀ ! ಸ್ವಾಮಿದ್ರೋಹೀ! ವಂಶದ್ರೋಹೀ ! ದೇಶದ್ರೋಹೀ ! ಇಂಥಾ ನೀಚವಾದ ಆಲೋಚನೆಗೆ ಅವಕಾಶವನ್ನು ಕೊಟ್ಟೆಯಾ ? ಯಾವ ಸುಖವನ್ನನುಭವಿಸಬೇಕೆಸಿ ಈ ಕಾರ್ಯಕ್ಕೆ ಮನಸುಕೊಟ್ಟೆ ? ಎಂಥವರ ಹೊಟ್ಟೆಯಲ್ಲಿ

ಹುಟ್ಟಿ ಎಂಥಾ ದಾರಿಯನ್ನು ತುಳಿದೆ? ನಿನ್ನ ಪೂರ್ವೀಕರನ್ನು ನೆನೆ. ಅವರು ಎಂಥಾ 'ಅಸಹಾಯ ಶೂರರು? ಅಭಿಮಾನದ ವೀರರು? ದ್ವಿತೀಯ ಭೀಷ್ಮನೆಂಬ ಬಿರುದಿನಿಂದ ಮೆರೆದ ನಿನ್ನ ಪಿತಾಮಹನನ್ನು ಮರೆಯಬೇಡ. ಇಡೀ ರಾಜ್ಯವನ್ನು ಕಸದ ಕಡ್ಡಿಯಂತೆ ಚಿಕ್ಕಮ್ಮನ ಮಕ್ಕಳಿಗೆ ಬಿಟ್ಟುಕೊಟ್ಟನು. ಅವರ ಪಾದಸೇವೆಗೆ ನಿಂತನು. ರಾಜ್ಯ ತಂತ್ರವನ್ನು ತಾನೇ ನಡೆಯಿಸಿದನು. ಎಷ್ಟೋ ಯುದ್ಧಗಳಲ್ಲಿ ಗೆದ್ದು, ಸ್ವಾಮಿಭಕ್ತನೆಂದು ಕೀರ್ತಿಪಡೆದನು. ಅಂಥಾ ಕೀರ್ತಿಯನ್ನು ಹುಡುಕುವ ವಾಂಛೆಯನ್ನು ಬಿಟ್ಟು, ಅವರ ವೀರ್ಯಕ್ಕೆ ಜನಿಸಿದ ನೀನು ಎಂಥಾ ಲುಬ್ಧಯೋಚನೆಯನ್ನು ಮಾಡಿದೆ? ಸ್ವರ್ಗಲೋಕ ದಲ್ಲಿ ಶಾಂತಿಸುಖವನ್ನನುಭವಿಸುವ ಅವರ ಆತ್ಮಕ್ಕೆ ಹಾರಾಟವನ್ನು ಹಚ್ಚಬೇಡ. ಅವರ ಕೋಪಾಗ್ನಿಯ ಪಾಲಾಗಬೇಡ. ಅವರ ಶಾಪದಾ ವಾನಲದಲ್ಲಿ ಬೆಂದುಹೋಗಬೇಡ. ರತ್ನಗಿರಿಯು ನಿನ್ನ ಒಡೆಯನ ರಾಜ್ಯ. ಅದರ ಮೇಲಿನ ಆಶೆಯನ್ನು ಬಿಡು. ನಿಜಗಲ್ಲು, ನಾಮಾ ವಶಿಷ್ಟವಾದ ಹಾಳುರಾಜ್ಯವು. ಅದನ್ನು ನೀನೇನು ಮಾಡುವೆ! ಅದರ ಮೇಲೆ ನಿನಗೇತಕ್ಕೆ ಆಶೆ! ಪೆನುಗೊಂಡೆಯು ನರಸನಾಯಕ ನದು. ಆವನು ನಿನಗ್ಗೆ ಕೊಡುವನೆಂಬುವುದು ಕನಸಿನವಾರ್ತೆ.

ಅವನ ಮಗಳು ಗಂಗಾಂಬೆಯಮೇಲಿನ ಮೋಹದಿಂದ ಈ ಕಾರ್ಯಕ್ಕೆ ಉಪಕ್ರಮಿಸಿರುವೆಯೋ ಯೇನು? ಆಕೆಯ ಮೋರೆ ಯನ್ನಾದರೂ ನೀನು ನೋಡಿಲ್ಲವೇ! ಆಕೆಯ ರೂಪವೆಂತೋ? ಗುಣಗಳೇನೋ? ರಸಿಕತೆಯಷ್ಟೋ? ನಿನಗೆ ಗೊತ್ತಿಲ್ಲ. ಅಂಥಾಕೆ ಯನ್ನು ಬಯಸಿ ಇಂಥಾ ದ್ರೋಹವೇ! ಆಕೆಯು ಸರ್ವಸಂಪದ್ಯುಕ್ತ ಳಾದರೂ ನಿನಗೆ ಲಭಿಸುವಳೆಂಬ ನಂಬಿಕೆಯೇನಿದೆ? ಸ್ವಾರ್ಥಪರನಾದ ನರಸನಾಯಕನು ನಿನಗೆ ಬೀಸಿದ ಬಲೆಯಾಗಲಿ, ನಿನಗೆ ಮಗಳನ್ನು ಕೊಡುವುದು ಸಟೆ. ನಿನ್ನನ್ನು ಸಮೀಪಕ್ಕೆ ಕೂಡಾ ಬರಗೊಡಿಸನು. ಒಂದುವೇಳೆ ಕೊಡುವನೆಂದೇ ಭಾವಿಸೋಣ. ನೀನಾಕೆಯನ್ನು ಪರಿ ಗ್ರಹಿಸಬಹುದೇ? ನರಸನಾಯಕನ ಜನನವನ್ನು ನೀನರಿಯೆಯಾ? ಓರ್ವ ಹೊಲಸು ದಾಸಿಯ ಹೊಟ್ಟೆಯಲ್ಲಿ ಬಂದ ಮೊರಟು ಕಂಕ

ನೆಂಬುವದು ಮರೆತೆಯಾ ? ಅಂಥವನಿಗೆ ಹುಟ್ಟಿದವಳನ್ನು ಕೂಡಿ ನೀನು, ಏನು ಭೋಗವನ್ನನುಭವಿಸಲೆಣಿಸಿದೆ? ಎಲೌ ! ನಿರ್ಭಾಗ್ಯಾ! ಭೋಗಗಳನ್ನನುಭವಿಸುವ ಯೋಗವೇ ನೀನು ಪಡೆದಿದ್ದರೆ, ಮಾನಿನೀ ರತ್ನವಾದ ರಂಗನಾಯಕಿಯನ್ನು ಕೈಯ್ಯಾರೆ ಕಳೆದುಕೊಳ್ಳುತ್ತಿದ್ದೆ ಯಾ? ರೂಪದ ರಾಶಿ. ಮೋಹದ ಗಣಿ. ವಿದ್ಯದ ಆಕಾರ. ಪ್ರೇಮದ ಪುಂಜ. ಅಂಥಾ ಸತೀಸಿರೋಮಣಿಯನ್ನು ಬುದ್ಧಿಮಾಂದ್ಯದಿಂದ ನೀನಾಗಿ ಹೋಗಲಾಡಿಸಿಕೊಂಡು ಬೇರೆ ಮಾನವ ವನಿತೆಯರ ಮೇಲೆ ಮನಸ್ಸು ಹೋಗಲೀಸಲು ನಾಚಿಕೆಯಿಲ್ಲವೇ? ಭೋಗಾಪೇಕ್ಷೆಯು ನಿನಗಿದ್ದರೆ ಜಡಬುದ್ಧಿಯನ್ನು ಬಿಟ್ಟು, ಒಡೆಯನಿಗಾಗಿ ರಣರಂಗದಲ್ಲಿ ಸತ್ತು ಸ್ವರ್ಗಕ್ಕೆ ಧಾಳಿಯನ್ನಿಡು. ಅಲ್ಲಿ ದೇವಾಂಗನೆಯರು ನಿನಗಾಗಿ ಎದುರು ನೋಡುತ್ತಾ ನಿಂತಿರುವರು. ಮುತ್ತಿನಾರತಿಗಳಿಂದ, ಪುಷ್ಪ ಮಾಲೆಗಳಿಂದ, ಮಂಗಳ ಗೀತದಿಂದ, ಮುಗುಳುನಗೆಯಿಂದ ನಿನ್ನನ್ನಾ ಹ್ವಾನಿಸುವರು. ಅವರೊಡನೆ ಉತ್ಕೃಷ್ಟವಾದ ಭೋಗವನ್ನನುಭವಿಸು. ಆಗಲಲ್ಲವೇ ರಂಗನಾಯಕಿಯ ಆತ್ಮಕ್ಕೆ ಶಾಂತಿಯು ! ಆಕೆಗೆ ದ್ರೋಹಿಯಾಗಬೇಡ. ಆಕೆಯ ಆತ್ಮಕ್ಕೆ ಹಾರಾಟ ಹಚ್ಚಬೇಡ. ಆಕೆಯು ಮುನಿದರೆ ನಿನ್ನಮೇಲೆ ಕೆಂಡವನ್ನು ಸುರಿಸುವಳು. ಆಗ ನೀನೆಲ್ಲಿ ನಿಲ್ಲುವೆ ? ಎಂತು ಬದುಕುವೆ ? ಆಕೆಯು ಸಾಮಾನ್ಯಳಲ್ಲ. ನಿನಗೆ ಲಭಿಸಬೇಕಾದ ವಸ್ತುವೇ ಅಲ್ಲ. ಲಭಿಸಿತ್ತು. ಕಳದುಕೊಂಡೆ. ಇನ್ನು ಇಹಲೋಕದ ಸುಖವನ್ನು ಬಯಸಬೇಡ; ಬಿಟ್ಟುಬಿಡು.

ಹೇ ! ಮರುಳೇ! ಜನನದ ಬೆನ್ನಹಿಂದೆಯೇ ಮರಣವಿರುವುದು. ನೀನು ಸಾವನ್ನು ಮರೆತಿದ್ದರೂ, ನಾವು ನಿನ್ನನ್ನು ಮರೆತಿಲ್ಲ. ಮೃತ್ಯು ದೇವತೆಯು ತನ್ನ ಜೋಳಿಗೆಯನ್ನು ಹಿಡಿದೇಯಿರುವಳು. ಕಾಲ ಒದ ಗಿದಕೂಡಲೇ ನೀನದರಲ್ಲಿ ಬೀಳಲೇಬೇಕು. ಯುಕ್ತಾಯುಕ್ತಗಳನ್ನು ನೋಡದೆ, ನ್ಯಾಯಾನ್ಯಾಯವನ್ನು ತರ್ಕಿಸದೆ, ಪಾಪಪುಣ್ಯಗಳ ಭೀತಿ ಯಿಲ್ಲದೆ ಹೊನ್ನು, ಹೆಣ್ಣು, ಮಣ್ಣುಗಳ ಮೇಲಿನ ದುರಾಸೆಯಿಂದ ಮೈಮರೆದು ಪ್ರವರ್ತಿಸುವುದರಲ್ಲಿ ಫಲವಿಲ್ಲ. ರತ್ನರಾಸಿಗಳ ಹಿಗ್ಗಿ ನಿಂದ, ರಾಣಿವಾಸದ ಭೋಗದಿಂದ, ರಾಜ್ಯದ ಆಡಂಬರದಿಂದ ಮೆರೆ

ಯುತ್ತಿದ್ದ ರಾಜರುಗಳು ತೃಟಿಕಾಲದಲ್ಲಿ ಕಾಲನ ಪಾಲಾದ ಇತಿಹಾಸ ಗಳನ್ನು ನೀನೆಷ್ಟು ಕೇಳಿಲ್ಲ? ಅವರೆಲ್ಲರೂ ತಮ್ಮ ರತ್ನದ ರಾಶಿಗಳನ್ನು ಹಿಂದೆ ಒಯ್ಯಲಿಲ್ಲ! ರಾಣಿವಾಸದವರು ಅವರನ್ನನುಸರಿಸಿ ಹೋಗ ಲಿಲ್ಲ! ರಾಜ್ಯದಮಾತಿನ್ನೇನು?

ಮೃತ್ಯುವಿಗೆ ತುತ್ತಾಗುವುದಕ್ಕೆ ಮುಂಚೆಯೇ ಸತ್ಕಾರ್ಯಗಳನ್ನು ಗೈದು, ಚರ್ವಿತ ಚರ್ವಣವಾದ ಈ ಜನನಮರಣದ ಪರಿವರ್ತನೆಯಿಂದ ತಪ್ಪಿಸಿಕೊಳ್ಳಬೇಕು. ಕಾಲನ ಪಾಶವು ಮೇಲೆಬಿದ್ದಾಗ ನಿನಗೆ ಏನೊಂದು ಕಾರ್ಯಕ್ಕೂ ಅವಕಾಶವಿರಲಾರದು. ಅರಗಳಿಗೆ ವಿಳಂಬನೆ ಮಾಡಲುಸಹಾ ನಿನಗೆ ಸ್ವತಂತ್ರವಿಲ್ಲ. ಆಗ ನೀನು ಪರಿತಪಿಸಿ ಹಂಬ ಲಿಸಿದರೆ ಫಲವೇನು? ನೀನು ಕೋರಿದಾಗ ಸುಕಾರ್ಯಕ್ಕೆ ಅವಕಾಶವಿರ ಲಾರದು. ಅಂಥಾ ಸುಸಂದರ್ಭವು ಮಾನವರ ಜೀವಿತದಲ್ಲಿ ಲಭಿಸು ವುದೇ ಅಪರೂಪ. ಈಗ ಲಭಿಸಿದೆ. ಈ ಸಮಯವನ್ನು ಹೋಗಲಾ ಡಿಸಿಕೊಂಡರೆ, ಮತ್ತೆ ದೊರೆಯುವದೆಂಬ ಭರವಸೆಯಿಲ್ಲ. ಹಿಂದೂ ಮುಂದೂ ನೋಡಬೇಡ. ಅನುಮಾನಿಸಬೇಡ. ಮುಂದಿಟ್ಟಹೆಜ್ಜೆ ಯನ್ನು ಹಿಂದಕ್ಕೆ ತೆಗೆಯದೆ, ಸ್ವಾಮಿಕಾರ್ಯಕ್ಕಾಗಿ ಹೋರಾಡು. ಹಗೆ ಯನ ಸೈನ್ಯವನ್ನು ಸೂರೆಗೊಂಡು ವಿಜಯಧ್ವಜವನ್ನು ಮೇಲಕ್ಕೆತ್ತು. ಆಗ ಪೆನುಗೊಂಡೆಯ ರಾಜ್ಯವು ನಿನ್ನನ್ನುಬಿಟ್ಟು ಮತ್ತೆಲ್ಲಿ ಹೋಗಬ ಲ್ಲದು? ರಾಮನಾಯಕನೇ ನಿನಗದನ್ನು ಅರ್ಪಿಸುವನು. ರಾಜ್ಯವೈಭ ವವೇ ನಿನಗೆ ದೊರೆಯುವುದು. ರಣದಲ್ಲಿ ಮಡಿದೆಯಾದರೆ ನೀನೇ ಪುಣ್ಯಾತ್ಮನು. ನಿನ್ನ ತಾತಮುತ್ತಾತನವರು ನಿನ್ನ ಆತ್ಮಕ್ಕೆ ಆಶೀರ್ವಾ ದವನ್ನು ಮಾಡುವರು. ಪ್ರಪಂಚವೆಲ್ಲವೂ ನಿನ್ನನ್ನು ಹೊಗಳುವುದು. ನಿನ್ನ ಸ್ವಾಮಿಯು ನಿನ್ನನ್ನು ಮೆಚ್ಚುವನು. ರಂಗನಾಯಕಿಯ ಆತ್ಮಕ್ಕೆ ಶಾಂತಿಯುಂಟಾಗುವುದು. ನೀನು ವೀರಸ್ವರ್ಗದಲ್ಲಿ ಸುಖಿಸುವೆ."

ಈರೀತಿ ಒಂದೇ ಉಸಿರಿಲಿ ನುಡಿದು ಆ ಮೂರ್ತಿಯು ಸುಮ್ಮನಾ ಯಿತು. ಭೀಮನಾಯಕನಿಗೆ ಬಾಗಿಸಿದ ತಲೆ ಮೇಲಕ್ಕೆ ಎತ್ತಲು ಚೈತನ್ಯವಿಲ್ಲದೇ ಇತ್ತು. ಭಯದಿಂದ ಗದಗದನೆ ನಡುಗುತ್ತಿದ್ದನು.

ಭಟರನ್ನು ಕರೆಯಬೇಕೆಂದರೆ ಬಾಯಿಬಾರದೆ ಹೋಯಿತು. ನಾಲಿಗೆಯು ಒಣಗಿಹೋಗಿತ್ತು. ಆ ಅಪೂರ್ವ ವ್ಯಕ್ತಿಯು ದಾರಿರಬಹುದೋ ಯೋಚಿಸಲು ಸಹಾ ಆತನಿಗೆ ಬುದ್ಧಿಯು ಹರಿಯದೆ ಹೋಯಿತು. ಬಹಳಕಾಲ ಸುಮ್ಮನೇ ಕುಳಿತನು. ಆ ನಾರೀರೂಪದ ರೌದ್ರಮೂರ್ತಿಯು ಮತ್ತೇನಾದರು ನುಡಿಯುವುದೋ ಏನೋ ಎಂದು ನೋಡಿದನು. ಯಾವ ಶಬ್ದವೂ ಕೇಳಲಿಲ್ಲ. ತನ್ನ ಭಟರಾದರೂ ಬಂದರೆ ಆ ಗಂಡವನ್ನು ಗೆಲ್ಲಬಹುದೆಂದು ಅಂದುಕೊಂಡನು. ಯಾರೂ ಬರಲಿಲ್ಲ. ನರಸನಾಯಕನ ಚಾರರು ದೂರದಲ್ಲಿದ್ದರು. ಅವರಾದರೂ ಬಾರದೆಹೋದರು. ಮೆಲ್ಲಮೆಲ್ಲನೆ ಧೈರ್ಯವನ್ನು ತಂದುಕೊಂಡನು. ತನ್ನ ಹೇಡಿತನಕ್ಕೆ ತಾನೇ ನಾಚಿ ತಲೆಯೆತ್ತಿ ನೋಡಿದನು. ಆ ಸ್ತ್ರೀರೂಪವು ಕಣ್ಣಿಗೆ ಕಾಣಲಿಲ್ಲ. ಮಟಮಾಯವಾಗಿ ಹೋಗಿದ್ದಿತು. ಬುದ್ಧಿಗೆ ಕವಿದಿದ್ದ ಮಂಕುಸಹಾ ಹರಿದುಹೋಗುತ್ತಾ ಬಂತು. ತಾನು ಕೇಳಿದ್ದ ಒಂದೊಂದು ವಾಕ್ಯವನ್ನೂ ಜ್ಞಾಪಕಕ್ಕೆ ತಂದುಕೊಂಡನು. ವಿಚಾರವೆಂಬ ತಕ್ಕಡಿಯಲ್ಲಿ ತೂಗಿ ಒಂದೊಂದರ ಬೆಲೆ ಕಟ್ಟಿದನು. ಆ ಉಪದೇಶವು ಅಮೂಲ್ಯವಾಗಿತ್ತು. ತನ್ನ ಉಪದೇಶದ ಗುರುವು ರಂಗನಾಯಕಿಯಲ್ಲದೆ ಬೇರೆ ಯಾರೂ ಯಿರಲಾರರೆಂದು ನಿಶ್ಚಯಿಸಿದನು. ಆಕೆಯ ಆಜ್ಞೆಗೆ ಬದ್ಧನಾಗಿ ಪ್ರವರ್ತಿಸಲು ಸೊಂಟಕಟ್ಟಿದನು. ಇಹಲೋಕದ ತುಚ್ಛಸುಖಾಪೇಕ್ಷೆಯನ್ನು ಚೂರುಚೂರುಮಾಡಿದಂತೆ, ತಾನು ನರಸನಾಯಕನಿಗೆ ಬರೆದಿದ್ದ ಪತ್ರವನ್ನು ಚೂರುಚೂರಾಗಿ ಹರಿದು ಬಿಸುಟಿದನು. ವೈರಿಯೊಡನೆ ಯುದ್ಧಮಾಡಿ, ಜಯಲಕ್ಷ್ಮಿಯನ್ನು ಕೈಗೊಂಡು, ಪಾಳೆಯಗಾರರ ಹೆಸರು ನಿಲ್ಲಿಸಿ, ರಾಮನಾಯಕನಿಗೆ ಬಲಭುಜವಾಗಿ ಪ್ರವರ್ತಿಸುವದೋ, ಅಥವಾ ಸ್ವಾಮಿಕಾರ್ಯ ದುರಂಧರನಾಗಿ ರಣದಲ್ಲಿ ಮಡಿದು ವೀರಸ್ವರ್ಗಕ್ಕೆ ಹೊರಡುವದೋ ಇವೆರಡರಲ್ಲಿ ಒಂದು ಜರುಗಲೇಬೇಕೆಂದು ನಿರ್ಧರಿಸಿಕೊಂಡನು. ನರಸನಾಯಕನಿಗೆ ಮತ್ತೊಂದು ಪತ್ರವನ್ನು ಬರೆದು ಆತನ ಚಾರರೊಡನೆ ಕಳುಹಿಸಿದನು.

---

# ೮ನೆಯ ಪ್ರಕರಣ.



ನಿಡುಗಲ್ಲಿನ ಪ್ರಜೆಯ ಸ್ವಾಮಿಭಕ್ತಿಯು ಅಸಮಾನವಾದದ್ದು. ಅದಕ್ಕೆ ದಿವಂಗತನಾಗಿದ್ದ ಸಂಗನಾಯಕನ ರಾಮರಾಜ್ಯವೇ ಕಾರಣ ವೆಂಬುವುದರಲ್ಲಿ ಸಂಶಯವೇನು? ಆತನ ಜೀವಿತಕಾಲದಲ್ಲಿದ್ದ ಭಕ್ತಿಗೆ ಇಮ್ಮಡಿಯಾದ ಭಕ್ತಿಯು ಪ್ರಜೆಗಳಿಗೆ ಆ ದಿನ ಆತನಮೇಲಿತ್ತು. ಅಂಥಾ ರಾಜನು ರಾಜನಾಗಲಿ, ಮಿಕ್ಕರಾಜರುಗಳೆಲ್ಲ ಪ್ರೇತರಾಜರೇ ಸರಿ. ಆ ರಾಜಭಕ್ತಿಯನ್ನು ಅವರು ಆ ದಿನ ವ್ಯಕ್ತಪಡಿಸುತ್ತಿದ್ದರು. ಆತನ ಮುದ್ದು ಕುವರಿಯ ವಿವಾಹಕ್ಕೆ ಹಸಿವುತೃಷೆಗಳನ್ನರಿಯದೆ, ಆಯಾಸ ಪ್ರಯಾಸಗಳನ್ನು ಗಣಿಸದೆ, ಹಗಲಿರುಳು ಪಟ್ಟಣವನ್ನಲಂ ಕಾರಮಾಡುತ್ತಿದ್ದರು. ಇಲ್ಲವಾದರೆ ನಿರ್ಮಾನುಷ್ಯವಾಗಿದ್ದ ನಿಡುಗಲ್ಲು ಕೋಟೆಯಲ್ಲಿ ಒಂದೆರಡು ದಿನಗಳಲ್ಲಿ ಕಲ್ಯಾಣಮಂಟಪಗಳನ್ನು ನಿರ್ಮಿಸ ಬೇಕೆಂದರೆ ಸಾಮಾನ್ಯವೇ ?

ಪಾಡ್ಯಮಿದಿನ ಪ್ರಾತಃಕಾಲ. ಮಧ್ಯಾಹ್ನಕ್ಕೆ ರಾಮನಾಯಕನು ಬರಬೇಕು. ಆತಗೆ ತಕ್ಕ ಬಿಡದಿ, ಉಚಿತಸತ್ಕಾರಮಾಡುವ ಭಾರವು ಬಸಪ್ಪನಾಯಕನಮೇಲಿತ್ತು. ಆತನು ಒಂದೊಂದನ್ನು ಪರೀಕ್ಷಿಸುತ್ತಾ, ಲೋಪಗಳನ್ನು ಸರಿಪಡಿಸುತ್ತಾ, ತನ್ನವರು ಮಾಡಿದ ಕಾರ್ಯಕ್ಕೆ ತೃಪ್ತಿಪಟ್ಟು ಶ್ಲಾಘಿಸುತ್ತಾ, ಮುಂದಿನ ಕಾರ್ಯಕ್ಕೆ ಪ್ರೋತ್ಸಾಹ ಕೊಡುತ್ತಾ ಇದ್ದನು. ತನ್ನ ಭಾರವು ಇನ್ನೆರಡುದಿನವಿತ್ತು. ತಂದೆ ಯಿಲ್ಲದ ಲೋಪವು ಲಾವಣ್ಯವತಿಗೆ ಕಾಣಿಸದಂತೆ, ಅರಸನಿಲ್ಲದ ನಿರುತ್ಸಾಹವು ಪ್ರಜೆಗಳಲ್ಲಿ ಹುಟ್ಟದಂತೆ, ಸಂಗನಾಯಕನಿಲ್ಲದ ಕೊರತೆ ರಾಮನಾಯಕನ ಮನಸ್ಸಿಗೆ ತಟ್ಟದಂತೆ, ವಿವಾಹವ ಮುಗಿಸಿ ತಾನು ಧನ್ಯನಾಗಬೇಕೆಂದಿದ್ದನು. ಮುಂದಿನಕಾರ್ಯವು ರಾಮನಾಯಕನ ತಲೆಯಮೇಲೆ ಬೀಳುವುದು. ಆತನ ಚಿತ್ತ. ಲಾವಣ್ಯವತಿಯ ಚಾತುರ್ಯ. ಪ್ರಜೆಗಳ ಪುಣ್ಯ. ತಾನು ಹೊರಗೆಬಿದ್ದಂತೆಯೆಂದು ಕಾರ್ಯಸಾಧನೆಯ ಲ್ಲಿದ್ದನು. ಪಟ್ಟಣವನ್ನು ಶೃಂಗರಿಸುವದೊಂದುಕಡೆ. ಇಡೀ ಸೈನ್ಯದ

ಭೋಜನಾದಿಗಳ ಸೌಕರ್ಯ ಮತ್ತೊಂದುಕಡೆ. ವಿವಾಹಕ್ಕೆ ಸಲಕರಣೆ ಮಾಡುವುದು ಇನ್ನೊಂದುಕಡೆ. ಮಧ್ಯಾಹ್ನಕ್ಕೆ ಬರಲಿರುವ ರಾಮ ನಾಯಕನಿಗೆ ಉಚಿತರೀತಿ ಆಹ್ವಾನವಿತ್ತು ಮಾರ್ಗಾಯಾಸದಿಂದ ಬರುವ ಆತನ ಸಿಬ್ಬಂದಿಗೆ ಉಪಚಾರಮಾಡಬೇಕಾದ್ದು ಬೇರೊಂದು ಕಡೆ. ತಮಪರಿ ನರಸನಾಯಕನು ಬರುವನೋ ಏನೋಎಂಬ ಭಯ. ಇವುಗಳಲ್ಲಿ ಬಸಪ್ಪನಾಯಕನಿಗೆ ಮಧ್ಯಾಹ್ನವು ಮೀರಿಹೋದದ್ದು ತಿಳಿಯದೇಹೋಯಿತು. ಕಾರ್ಯನಿಮಗ್ನನಾಗಿದ್ದ ಜನಕನನ್ನು ತಡ ಮಾಡದೆ ಬರಹೇಳೆಂದು ಲಾವಣ್ಯವತಿಯು ಗೆಳತಿಯೋರ್ವಳನ್ನು ಬಸಪ್ಪನಾಯಕನಬಳಿಗೆ ಕಳುಹಿಸಲು, ಆಕೆಯು ಬಂದು " ಸ್ವಾಮೀ! ಅಮ್ಮನವರು ನಿಮ್ಮನ್ನು ಬೇಗ ಕರೆತಾರೆಂದು ಕಳುಹಿಸಿರುವರು" ಎಂದು ಬಿನ್ನಹಮಾಡಿದಳು. ಬಸಪ್ಪನಾಯಕನು ಪೂರ್ತಿಗೊಳಿಸಬೇಕಾದ ಕಾರ್ಯಗಳೆಷ್ಟೋ ಇದ್ದವು. ಆದರೂ ಲಾವಣ್ಯವತಿಯು ತನ್ನನ್ನು ಕಾರ್ಯವಿಲ್ಲದೇ ಕರೆಸಿರುವುದಿಲ್ಲವೆಂದು ಆಲೋಚಿಸುವನಾಗಿ, ಮಗಳ ಅಂತಃ ಪುರಕ್ಕೆ ಹೋಗಿ " ಮಗಳೇ ! ನನ್ನ ಕಾರ್ಯಭಾರವು ಅತ್ಯಧಿಕವಾದದ್ದು. ನನ್ನ ಸೋದರನ ಆತ್ಮಪ್ರಭಾವದಿಂದಲ್ಲದಿದ್ದರೆ, ಇದರಲ್ಲಿ ಸಹಸ್ರಾಂಶ ವಾದರೂ ಮಾಡಲಾಗುತ್ತಿದ್ದಿಲ್ಲ. ಇನ್ನೂ ಕೊನೆಗಾಣಿಸಬೇಕಾದ ದ್ದೆಷ್ಟೋ ಇದೆ. ನನ್ನನ್ನು ಆತುರಪಟ್ಟು ಏತಕ್ಕೆ ಕರೆಸಿದೆ?" ಎಂದು ಪ್ರಶ್ನೆಮಾಡಿದನು.

**ಲಾವಣ್ಯವತಿ** – ಜನಕಾ ! ಬೆಳಗಿನಿಂದಲೂ ನಾನು ಬೆಟ್ಟದ ತುದಿಯನ್ನೇರಿ ಪ್ರಜಾಸಮಿತಿಯು ಮಾಡುತ್ತಿದ್ದ ಅದ್ಭುತ ಕಾರ್ಯಗಳನ್ನೂ ನಿಮ್ಮ ಉತ್ಸಾಹವನ್ನೂ ನೋಡುತ್ತಲೇ ಇದ್ದೇನೆ. ನಮ್ಮ ಗೌರವಕ್ಕೆ ರಾಮನಾಯಕನ ರಾಜಯೋಗ್ಯತೆಗೆ ಅರ್ಹವಾದ ಸನ್ಮಾನವನ್ನು ಮಾಡಬಲ್ಲೆವೆಂಬುವುದರಲ್ಲಿ, ಲೇಶಾಂಶವೂ ಅನುಮಾನವಿಲ್ಲ. ಆದರೆ ನಾನು ನಿಮ್ಮಕಡೆ ಒಂದುಕಣ್ಣಿಟ್ಟು ರತ್ನಗಿರಿಯಕಡೆ ಮತ್ತೊಂದು ಕಣ್ಣಿಟ್ಟು ಇದ್ದೇನೆ. ಈಗಲಾದರೋ ಮಧ್ಯಾಹ್ನವಾಯಿತು. ರಾಮ ನಾಯಕನು ಈ ಹೊತ್ತಿಗೆ ಬರಬೇಕಾಗಿತ್ತು. ಇಲ್ಲಿಗೆ ಬರದಿರುವುದೇ ಅಲ್ಲ. ದೃಷ್ಟಿಹರಿಯುವವರೆಗೂ ರತ್ನಗಿರಿಯಕಡೆ ನೋಡಿದರೂ

ಆತನ ಸುಳಿವೇ ಇಲ್ಲ. ಅದರಿಂದ ನಿಮ್ಮ ಕಾರ್ಯಕ್ಕೆ ಅಂತರಾಯ ಮಾಡಿ ಕರೆಯಿಸಿಕೊಂಡೆನು. ರಾಮನಾಯಕನು ಏನುಕಾರಣ ಬಾರದೇ ಹೋದನೋ ತಿಳಿಯೆ? ಚಾರರನ್ನಾದರೂ ಕಳುಹಿಸಿ ತಿಳಿದುಕೊಳ್ಳಿರಿ. ಆತನು ಬಾರದಮೇಲೆ ಈ ಅಲಂಕಾರಗಳೂ, ಈ ಆಡಂಬರಗಳೂ ನಮಗೇಕೆ ? ಆತನೇ ಬಾರದಿದ್ದರೆ ನಮಗೇನು ಆಶೆಯಿದೆ ?

**ಬಸಪ್ಪನಾಯಕ** :— ಮಗಳೇ! ನೀನು ಹೇಳಿದ ಮಾತು ನಿಜ. ರಾಮನಾಯಕನು ಈ ಹೊತ್ತಿಗೆ ಇಲ್ಲಿಗೆ ಬರಬೇಕಾಗಿತ್ತು. ವಿವಿಧಕಾರ್ಯಗಳಲ್ಲಿದ್ದ ನಾನು ಮಧ್ಯಾಹ್ನವು ಮೀರಿದ್ದು ಗಮನಿಸಲಿಲ್ಲ. ಆದರೂ ಒಂದು ವಿಷಯದಲ್ಲಿ ನಾನು ಎಚ್ಚರಿಕೆಯಿಂದಲಿದ್ದೇನೆ. ಪೆನುಗೊಂಡೆಯ ದಾರಿಯ ಕಾವಲಿಗೆ ಅನೇಕ ಭಟರನ್ನು ನಿಯಮಿಸಿ ರುವೆನು. ನಿಮಿಷನಿಮಿಷಕ್ಕೂ ಆ ಕಡೆಯ ವಾರ್ತೆಯು ನನಗೆ ಬರುತ್ತ ಲಿವೆ. ನರಸನಾಯಕನು ಹತ್ತುಮೈಲುಗಳ ಸಮೀಪದಲ್ಲಿ ಎಲ್ಲಿಯೂ ಬಂದಿಲ್ಲ. ಅವನು ಬರುವ ಸೂಚನೆಯೇ ಕಾಣಲಿಲ್ಲ. ಆದಕಾರಣ ನಾವು ಭಯಪಡಬೇಕಾದ್ದಿಲ್ಲ.

**ಲಾವಣ್ಯವತಿ** :— ರಾಮನಾಯಕನು ಯೇತಕ್ಕೋಸುಗ ಆಲಸ್ಯಮಾಡಿರಬಹುದು.

**ಬಸಪ್ಪನಾಯಕ** :— ಅದು ತಿಳಿಯದೇ ಹೋಯಿತು. ಆಯಾಸವನ್ನು ತೀರಿಸಿಕೊಳ್ಳಲು ಮಾರ್ಗಮಧ್ಯದಲ್ಲಿ ಯೇನಾದರೂ ನಿಂತಿರುವನೋ ? ಬೇರೆಯಾವುದಾದರೂ ರಾಜ್ಯಕಾರ್ಯದಿಂದ ಆಲಸ್ಯ ವಾಗಿರುವುದೋ? ಈಗಲೇ ಚಾರರನ್ನು ಕಳುಹಿಸಿ ತಿಳಿದುಕೊಳ್ಳುತ್ತೇನೆ.

**ಲಾವಣ್ಯವತಿ** :— ಆತನು ಬಾರದೇ ಹೋದರೆ ?

**ಬಸಪ್ಪನಾಯಕ** :— ಮಾತು ಕೊಟ್ಟು ತಪ್ಪುವಾತನಲ್ಲ. ಆ ಅನುಮಾನವು ನಿನಗೆ ಬೇಡ.

**ಲಾವಣ್ಯವತಿ** :--- ಈ ದಿನ ಮಧ್ಯಾಹ್ನಕ್ಕೆ ಬರುವೆನೆಂದಲ್ಲವೇ ಆತನು ಬರೆದಿರುವುದು.

**ಬಸಪ್ಪನಾಯಕ** :— ನಿಜ.

**ಲಾವಣ್ಯವತಿ** :— ಆ ಪತ್ರವೆಲ್ಲಿರುವುದು ? ನಾನದನ್ನು ನೋಡಬೇಕು.

**ಬಸಪ್ಪನಾಯಕ** :— ಕಳುಹಿಸಿಕೊಡುವೆನು.

ಹೀಗೆಂದು ಬಸಪ್ಪನಾಯಕನು ಹೊರಟು ಹೋದನು ರಾಮ-ನಾಯಕನು ಬರೆದಿದ್ದ ಪತ್ರವನ್ನು ಲಾವಣ್ಯವತಿಗೆ ಕಳುಹಿಸಿಕೊಟ್ಟನು. ರತ್ನಗಿರಿಯ ಮಾರ್ಗಕ್ಕೆ ಇದಿರಾಗಿ ತನ್ನ ಚಾರರನ್ನು ಕಳುಹಿಸಿದನು. ರಾಮನಾಯಕನು ಎಷ್ಟು ದೂರದಲ್ಲಿರುವನೋ, ಆಲಸ್ಯವಾಗಲು ಕಾರಣವೇನೋ ತಿಳಿದುಬನ್ನಿರೆಂದು ಆಜ್ಞೆಮಾಡಿದನು. ಚಾರರು ಹೊರಟು ಹೋದರು. ಆತನು ಮಿಕ್ಕಕಾರ್ಯಗಳಲ್ಲಿ ಮಗ್ನನಾಗಿದ್ದನು.

ದೊಡ್ಡಪ್ಪನು ಕಳುಹಿಸಿದ ಪತ್ರವನ್ನು ಕೈಯಲ್ಲಿ ಹಿಡಿದು ಲಾವಣ್ಯವತಿಯು ಅಂತಃಪುರದಲ್ಲಿ ಏಕಾಂತದಲ್ಲಿ ಕುಳಿತಿದ್ದಳು. ಮನೋನಾಯಕನ ಆ ಶುಭಲೇಖೆಯನ್ನು ಅನೇಕಾವರ್ತಿ ಕಣ್ಣಿಗೆ ಒತ್ತಿಕೊಂಡಳು. ಕೊನೆಗೆ ಈ ರೀತಿ ಓದಿಕೊಂಡಳು.

" ಶ್ರೀ ಪೇಲ್ಬಂಡೆಯ ಅಧಿಪತಿಯಾದ ಬಸಪ್ಪನಾಯಕನಿಗೆ. ರತ್ನಗಿರಿ ರಾಮನಾಯಕನು ವಿಶ್ವಾಸಪೂರ್ವಕ ಪ್ರಣಾಮಗೈದು ಬರೆಯುವ ಪತ್ರ.

ನಿಮ್ಮ ಲೇಖೆಯೂ, ಅದರೊಡನೆ ಕಳುಹಿಸಿದ್ದ ನಿಡುಗಲ್ಲು ರಾಜಕುವರಿಯ ಪತ್ರವೂ ಸೇರಿದವು. ಅಭಿಪ್ರಾಯವು ಮನಸ್ಸಿಗೆ ತಟ್ಟಿತು. ಇಕ್ಕಟ್ಟಿಗೆ ಸಿಕ್ಕಿದ ಮಾನಿನಿಯರ ಮಾನರಕ್ಷಣೆಮಾಡುವುದು ಕ್ಷತ್ರಿಯರ ಧರ್ಮ. ರತ್ನಗಿರಿಯವರ ಆಚಾರ. ಅದರಲ್ಲಿ ವೀರರಿಗೆ ವೀರನೂ, ರಾಜರಿಗೆ ರಾಜನೂ, ಪಾಳೆಯಗಾರರ ವಂಶಕ್ಕೆ ಶಿರೋಮಣಿಯೂ ಆದ ಸಂಗನಾಯಕನ ಸುಪುತ್ರಿಯ ಮಾನಧನವನ್ನು

ಓರ್ವ ನೀಚಕುಲೋದ್ಭವನೂ, ದುರ್ಮತಿಯೂ, ಹೇಡಿಯೂ ಆದ ನರಸನಾಯಕನು ಅಪಹರಿಸುವನೆಂದರೆ ನೋಡಿ ಸುಮ್ಮನಿರಬಲ್ಲೆನೇ ? ಇದಲ್ಲದೆ ಆ ಗುಣವತಿಯು ನನ್ನನ್ನು ವರಿಸಿರುವಳು. ಅಂಥಾಕೆಯ ಮೇಲೆ ಓರ್ವ ದಾಸೀಪುತ್ರನು ಕೈ ಹಾಕುವನೆಂದರೆ ಕೆಂಡಕ್ಕೆ ನೊಣ ಮುತ್ತಿದಂತಾಯಿತು. ಬಿದಿಗೆಯದಿನ ಅವನು ಬರುವವನಿದ್ದಾನೆ ಯಷ್ಟೇ ? ಪಾಡ್ಯಮಿಯದಿನ ಮಧ್ಯಾಹ್ನಕ್ಕೆ ಮುಂಚೆಯೇ ನಾನು ಸೈನ್ಯಯುತನಾಗಿ ನಿಮ್ಮಲ್ಲಿಗೆ ಬರುವೆನು. ನನ್ನ ಹನ್ನೆರಡು ಸಾವಿರ ಸುಶಿಕ್ಷಿತ ಭಟರ ಮುಂದೆ ನರಸನಾಯಕನ ದಂಡು ಎಷ್ಟಿದ್ದರೂ ನಿಲ್ಲ ಲಾರದು. ನೀವು ಹೇಳಿರುವಂತೆ ನಿಮ್ಮ ಸೈನ್ಯವನ್ನೂ ನಿಡಗಲ್ಲು ಪ್ರಜೆಗಳನ್ನೂ ಸನ್ನದ್ಧಗೊಳಿಸಿ ಇರಬೇಕು. ನಾನು ಬರುವುದು ಸತ್ಯ. ನೀವು ಅನುಮಾನಿಸಬೇಕಾದ್ದಿಲ್ಲ. ಭಾವಿ ಕಾರ್ಯಗಳನ್ನು ಸಿದ್ಧ ಪಡಿಸಿರಿ.

ನಿಮ್ಮ ಕುವರಿಗೆ ಇಷ್ಟುಮಾತ್ರ ತಿಳುಹಿಸಬೇಕು. ಲಾವಣ್ಯ ವತಿಯು ಲಾವಣ್ಯವತಿಯೆಂಬುವುದು ನಾನು ಬಲ್ಲೆನು. ಸಂಗನಾಯ ಕನು ಸತ್ತುಹೋಗಿದ್ದರೇನು ? ಆಕೆಯ ಶರೀರದಲ್ಲಿ ಪಾಳೆಯಗಾರರ ರಕ್ತವು ಹರಿಯುತ್ತಿದೆಯಾಗಲಿ ಬತ್ತಿಹೋಗಿಲ್ಲ. ರಾಜ್ಯಹೀನಳಾದ ರೇನು ? ಮನೋರಾಜ್ಯದ ಮೇಲಿನ ಅಧಿಕಾರವನ್ನು ಆಕೆ ಕಳೆದು ಕೊಂಡಿಲ್ಲ. ಧನಹೀನಳೆಂಬ ಅಳುಕು ಆಕೆಗೆ ಬೇಡ. ಸದ್ಗುಣವೆಂಬ ರತ್ನದ ರಾಸಿಯು ತನ್ನಲ್ಲಿದೆ. ತನ್ನ ಪಾಲಿನ ದೈವವೆಂದು ನನ್ನನ್ನಾಕೆ ಯು ನಂಬಿರುವಳು. ನನ್ನ ಪಾಲಿನ ಭಾಗ್ಯದ ಲಕ್ಷ್ಮಿಯೆಂದು ನಾನು ನಂಬಿರುವೆನು. ಪ್ರಯಾಣಮಾಡಿ ಬರುವೆನು.

ತಮ್ಮ ವಿಧೇಯ,

**ರಾಮನಾಯಕ.**

ಮೇಲೆ ಮೇಲೆ ಈ ಪತ್ರವನ್ನು ಓದಿಕೊಂಡಳು. ರಾಮನಾ ಯಕನ ಶೌರ್ಯವೂ ಆತನ ಔದಾರ್ಯವೂ ಆಕೆಗೆ ವ್ಯಕ್ತವಾಯಿತು. ಆತನ ಮೇಲೆ ಪ್ರೇಮವೂ ಹೆಚ್ಚಾಯಿತು. ಬಾರದೇಹೋದನೇ

ಎಂಬ ಆತುರವು ಮಿತಿಮೀರಿತು. ನಿದಾನವಿಲ್ಲದೆ ಹೋಯಿತು. ಗೆಳತಿಯೊಬ್ಬಳನ್ನು ಕರೆದು, ರತ್ನಗಿರಿಗೆ ಹೋಗಿ ಬಂದಿದ್ದ ಚಾರನನ್ನು ಬರಹೇಳಿ, ಅವನು ಬಂದೊಡನೆಯೇ “ ಎಲೌ ಚಾರನೇ ! ನೀನು ರತ್ನಗಿರಿಗೆ ಹೋಗಿದ್ದೆಯಲ್ಲಾ ? ಅಲ್ಲಿ ನಡೆದ ಸಮಾಚಾರವೆಲ್ಲವನ್ನೂ ವಿವರಿಸು ” ಎಂದು ಕೇಳಿದಳು.

**ಚಾರ** :— ಅಮ್ಮಣ್ಣನವರೇ ! ಯಾವ ಸಮಾಚಾರವನ್ನು ತಿಳಿಸಲಿ ?

**ಲಾವಣ್ಯವತಿ** :— ನೀನು ದೊಡ್ಡಪ್ಪನವರ ' ಆಜ್ಞೆಯಮೇರೆಗೆ ಪತ್ರವನ್ನು ಒಯ್ದಿದ್ದೆಯಲ್ಲಾ ?

**ಚಾರ** :— ಅಹುದು ಒಯ್ದಿದ್ದೆನು.

**ಲಾವಣ್ಯವತಿ** :— ಒಯ್ದು ದಾರಕೈಲಿ ಕೊಟ್ಟೆ ?

**ಚಾರ** :— ರಾಮನಾಯಕನ ಕೈಯಲ್ಲಿ ಕೊಟ್ಟೆನು.

**ಲಾವಣ್ಯವತಿ** :— ಆಗ ಅವರು ಎಲ್ಲಿದ್ದರು ? ಏನು ಮಾಡುತ್ತಿದ್ದರು ?

**ಚಾರ** — ಸಭಾಮಂಟಪದಲ್ಲಿ ರಾಜ್ಯಕಾರ್ಯದಲ್ಲಿದ್ದರು.

**ಲಾವಣ್ಯವತಿ** :— ಸಭೆಯಲ್ಲಿ ಯಾರ್ಯಾರಿದ್ದರು ?

**ಚಾರ** — ಪ್ರಮುಖರನೇಕರಿದ್ದರು ಮತ್ತು ಮಂತ್ರಿ—ಭೀಮನಾಯಕನಿದ್ದನು

**ಲಾವಣ್ಯವತಿ** :— ರಾಮನಾಯಕನು ಕೂಡಲೇ ಪತ್ರವನ್ನು ನೋಡಿಕೊಂಡನೇನು ?

**ಚಾರ** .— ನೋಡಿಕೊಂಡನು.

**ಲಾವಣ್ಯವತಿ** :— ಅಭಿಪ್ರಾಯವನ್ನೇನಾದರೂ ವ್ಯಕ್ತಗೊಳಿಸಿದನೇ ಹ್ಯಾಗೆ ?

**ಚಾರ**:— ಕಿಡಿಕಿಡಿಯಾದನು. ಮತ್ತು ಆ ಪತ್ರವನ್ನು ಭೀಮನಾಯಕನಿಗೆ ಕೊಟ್ಟನು.

**ಲಾವಣ್ಯವತಿ**:— ಅನಂತರ.

**ಚಾರ**:— ಅನಂತರ ಸಭೆಯಲ್ಲಿದ್ದವರೆಲ್ಲರೂ ಕೇಳುವಂತೆ ಎರಡೂ ಪತ್ರಗಳನ್ನು ಆಸ್ಥಾನದ ಪುರೋಹಿತರು ಓದಿದರು.

**ಲಾವಣ್ಯವತಿ**:— ರಾಮನಾಯಕರೇನಂದರು ?

**ಚಾರ** — ನರಸನಾಯಕನ ಮೇಲೆ ಸಿಟ್ಟಾದರು. ಯುದ್ಧ ಸನ್ನದ್ಧರಾಗಿ ಸರ್ವರೂ ಸಿಡಗಲ್ಲಿಗೆ ಪ್ರಯಾಣಮಾಡಬೇಕೆಂದು ಅಪ್ಪಣೆಕೊಟ್ಟರು.

**ಲಾವಣ್ಯವತಿ**:— ಭೀಮನಾಯಕನೋ ?

**ಚಾರ**.— ಮುಗುಳುನಗೆ ನಕ್ಕನು.

**ಲಾವಣ್ಯವತಿ**.— ಏತಕ್ಕಾಗಿ ? ಭಿನ್ನಾಭಿಪ್ರಾಯದಿಂದಲೇ ?

**ಚಾರ**.— ಅಲ್ಲ. ನರಸನಾಯಕನು ನಿಮ್ಮನ್ನು ಮದುವೆಯಾಗಲು ಬರುತ್ತಿರುವನೆಂದು ಕೇಳಿ.

**ಲಾವಣ್ಯವತಿ**:— ರಾಮನಾಯಕನಿಗೆ ವ್ಯತಿರೇಕ ಮಾತನಾಡಲಿಲ್ಲವಲ್ಲಾ ?

**ಚಾರ**.— ಇಲ್ಲ.

**ಲಾವಣ್ಯವತಿ**:— ಸಭೆಯಲ್ಲಿ ಯಾರಾದರೂ ರಾಜನಿಗೆ ವ್ಯತಿರೇಕವಾಡಿದರೇನು ?

**ಚಾರ** — ಇಲ್ಲ. ಆತನ ಅಭಿಪ್ರಾಯವನ್ನು ಎಲ್ಲರೂ ಮೆಚ್ಚಿದರು. ನಿಮಗೆ ಸಹಾಯವಾಗಿ ಬರಲು ಉದ್ಯುಕ್ತರಾದರು.

**ಲಾವಣ್ಯವತಿ**.— ಒಂದುಳಿಯುವ ಲಕ್ಷಣವೇನಾದರೂ ಕಾಣಬಂತೇನು ?

**ಚಾರ**:— ಯಾರಲ್ಲಿಯೂ ಕಾಣಲಿಲ್ಲ.

**ಲಾವಣ್ಯವತಿ**— ನರಸನಾಯಕನು ಬಲವಂತನೆಂಬ ಅಂಜಿಕೆಯೇನಾದರೂ ಕಂಡುಬಂತೇನು ?

**ಚಾರ**;— ಆತನೆಂದರೆ ರತ್ನಗಿರಿಯವರಿಗೆ ಅಲಕ್ಷ್ಯ.

**ಲಾವಣ್ಯವತಿ** :— ನಾನು ಬಡವಿಯೆಂದು ಯಾರಾದರೂ ನುಡಿದರೇನು ?

**ಚಾರ** .— ನೀನೆಂದರೆ, ರಾಜನುಮೊದಲು ಚಾರನವರೆಗೂ ಸರ್ವರೂ ಗೌರವದಿಂದ ಮಾತನಾಡಿದರು.

**ಲಾವಣ್ಯವತಿ**:— ರಾಮನಾಯಕನು ಬರುವದು ನಿಜ ?

**ಚಾರ**.— ನಿಜ. ಏನೊಂದು ಅನುಮಾನವೂ ಇಲ್ಲ.

**ಲಾವಣ್ಯವತಿ**·— ನೀನಿನ್ನು ಹೋಗು.

ಅವನನ್ನು ಕಳುಹಿಸಿಕೊಟ್ಟು ಪುತ್ರೀಮೈತ್ರಿ ಪತ್ರವನ್ನು ನೋಡಿದಳು. ಚಾರನ ಒಂದೊಂದು ವಾಕ್ಯವನ್ನು ಮನನ ಮಾಡಿದಳು ಸಮಾಧಾನ ಮಾತ್ರ ಉಂಟಾಗಲಿಲ್ಲ. ಮಧ್ಯಾಹ್ನಕ್ಕೆ ಮುಂಚೆಯೇ ಬರುವನೆಂದು ಬರೆದಿದ್ದ ರಾಮನಾಯಕನು ಮೂರು ಝಾವವಾದರೂ ಬರಲಿಲ್ಲ. ಆಕಡೆ ಹೋಗಿದ್ದ ಚಾರರುನಹಾ ಹಿಂದಿರುಗಲಿಲ್ಲ.

ಬಸಪ್ಪನಾಯಕನು ಪ್ರೈಮರಾಯನ ಪೆನುಗೊಂಡೆಯ ಮಾರ್ಗಕ್ಕೆ ಕಾವಲಿಟ್ಟಿದ್ದನು. ನರಸನಾಯಕನು ಬರುವ ಲಕ್ಷಣವೇ ತೋರಲಿಲ್ಲ. ಆತನಿಗೆ ಸಮಾಧಾನವಿತ್ತು. ಮಗನ ವಿವಾಹಕಾರ್ಯದಲ್ಲಿ ಮಗ್ನನಾಗಿದ್ದನು. ಪ್ರಜಾಸಮಿತಿಯ ಉತ್ಸಾಹಕ್ಕೆ ಮೇರೆಯಿರಲಿಲ್ಲ. ಎಲ್ಲೆಲ್ಲಿ ನೋಡಿದರೂ ಮಂಗಳವಾದ್ಯಗಳು. ಭೇರೀ-ಕಹಳೆಗಳು. ಕೋಟೆಯ ಅಲಂಕಾರವು ಕಡುರಮ್ಯವಾಗಿತ್ತು. ಯಾರ ಮುಖದಲ್ಲಿ ನೋಡಿದರೂ ಸಂತೋಷವು ತಾಂಡವವಾಡುತ್ತಿತ್ತು.

ಸಾಯಂಕಾಲವಾಯಿತು. ಪ್ರಜೆಗಳ ಆನಂದಘೋಷವು ಕಿವುಡುಗೊಳಿಸುವಂತಿತ್ತು. ತಮ್ಮ ಅರಸುಮಗನು ರಾಮನಾಯಕನನ್ನು ಮದುವೆಯಾಗುವುದನ್ನು ನೋಡುವ ಇಚ್ಛೆಯು ಹೆಚ್ಚಾಗುತಿತ್ತು.

ನರಸನಾಯಕನು ಯಾವಾಗ ಮೇಲೆ ಬೀಳುವನೋ ಎಂಬ ಭಯವು ಒಂದುಕಡೆ ಇದ್ದೇಯಿದ್ದಿತು. ಯುದ್ಧದ ಸಂಭವವೇ ಒದಗಿದರೆ, ವಿವಾಹಕ್ಕೆ ವಿಘ್ನಬಾರದಂತೆ ಕಾದಾಡಿ ಸಾಯುವುದು ಸಹಾ ಅವರಿಗೆ ಆನಂದದಾಯಕವಾಗಿತ್ತು. ಸರ್ವರೂ ಆಯುಧ ಪಾಣಿಗಳಾಗಿದ್ದರು.

ಲಾವಣ್ಯವತಿಯ ಮುಖಚಂದ್ರನನ್ನು ಮಾತ್ರ ಚಿಂತೆಯೆಂಬ ಕಪ್ಪುಮೇಘಗಳು ಕಳಾಹೀನವಾಗಿ ಮಾಡಿದ್ದವು ಆ ತರುಣಿಯ ಮನಸ್ಸು ಕಳವಳಿಸುತ್ತಿತ್ತು. "ನಾವಾದರೋ ಸರ್ವ ಸನ್ನಾಹದಿಂದಿ ರುವೆವು ಬೆಳಗಾದರೆ ವಿವಾಹವು ಜರುಗಬೇಕಾಗಿದೆ. ರಾಮನಾಯ ಕನು ಏತಕ್ಕೆ ಬಾರದೇ ಹೋದನೋ ತಿಳಿಯೆ. ದುರ್ಗದ ಶಿಖರ ವನ್ನೇರಿ ದೃಷ್ಟಿಯು ಹರಿಯುವವರೆಗೂ ನೋಡಿದರೂ ರಾಮನಾಯ ಕನ ಸೈನ್ಯವು ಕಾಣದೇಹೋಯಿತು. ಬರುವನೋ ಬಾರನೋ! ನಂಬಿದ ಅಬಲೆಯನ್ನು ಕೈ ಹಿಡಿದು ಕಾಪಾಡುವನೋ ನಡುನೀರಿನಲ್ಲಿ ಕೈ ಬಿಡುವನೋ. ನರಸನಾಯಕನ ಸೈನ್ಯಕ್ಕೇನಾದರೂ ಅಂಜಿ ಹಿಮ್ಮು ಖನಾದನೋ ? ಒಬ್ಬ ವನಿತೆಗಾಗಿ ಇಷ್ಟುಕಾರ್ಯವು ಯೇತಕ್ಕೆಂದು ಸುಮ್ಮನಾದನೋ ತಿಳಿಯೆ

ರಾಮನಾಯಕಾ ! ಮನ್ಮನೋನಾಯಕಾ ! ನೀನು ಯೇತಕ್ಕೆ ತಡಮಾಡಿದೆ ? ಬಲ್ಲಿದರಿಗೆ ಅವಕಾಶವನ್ನು ಬಡವರಿಗೆ ಆಶೆಯನ್ನು ಕೊಡಬಾರದೆಂಬುವ ಬುಧಜನ ವಾಕ್ಯವನ್ನು ಕೇಳ್ದರಿಯೆಯಾ ? ಬಡವಳಾದ ನನಗೆ ಆಶೆಯನ್ನು ಕೊಟ್ಟು ಕೈಬಿಟ್ಟರೆ, ಎದೆಯೊಡೆದು ಸಾಯುವೆನು. ಆದರ ಫಲವನ್ನು ನೀನು ಜನ್ಮಜನ್ಮಾಂತರದಲ್ಲಿಯೂ ಅನುಭವಿಸಬೇಕಾಗುವುದು. ಬಲ್ಲಿದನಾದ ನರಸನಾಯಕನ ಪ್ರಾಬ ಲ್ಯಕ್ಕೆ ನೀನಾಗಿ ನೀನು ಅವಕಾಶಕೊಟ್ಟದ್ದೇ ಆದರೆ, ನಾನೇನೋ ಕ್ಷಣಮಾತ್ರ ಮನಸ್ಸು ಘಟ್ಟಿಮಾಡಿಕೊಂಡು ಪ್ರಾಣಹತ್ಯ ಮಾಡಿ ಕೊಳ್ಳುವೆನು. ಆದರಿಂದ ನನಗಾಗುವ ಕೊರತೆಯೇನೂ ಇಲ್ಲ. ಲೋಕಕ್ಕಾಗುವ ಕೊರತೆ ಅಷ್ಟುಕ್ಕೂ ಕಡಿಮೆ. ಆದರೆ ಮದೋನ್ಮತ್ತ

ಸಾವ ನರಸನಾಯಕನ ಕತ್ತಿಗೆ ಅಡ್ಡವಿಲ್ಲದಂತಾಗಿ ಕೀರ್ತಿವಂತರಾದ ಪಾಳೆಯಗಾರರ ವಂಶವೇ ನಿರ್ನಾಮವಾಗುವುದು. ಇದಲ್ಲದೆ ಆ ಘಾತಕನ ಹಾವಳಿಯನ್ನು ತಾಳಲಾರದೆ ಯಾವ ಬೆಟ್ಟಗಳ ಮೇಲೋ, ಗುಡ್ಡಗಳ ಮರೆಯಲ್ಲಿಯೋ, ಗುಹೆಗಳಲ್ಲೋ, ಗ್ರಾಮಗಳಲ್ಲೋ, ಪ್ರಾಣರಕ್ಷಣೆಯನ್ನು ಮಾಡಿಕೊಂಡಿದ್ದು ನಿನ್ನ ಸಹಾಯವನ್ನು ನಂಬಿ ಬಂದಿರುವ ಈ ಪ್ರಜಾಸಮಿತಿಯನ್ನು ಮತ್ತೊಮ್ಮೆ ನರಸನಾಯಕನ ವಶಮಾಡುವುದು ದ್ರೋಹವಲ್ಲವೇ? ಪ್ರಪಂಚದ ಗೋಜನ್ನು ಬಿಟ್ಟುಕೊಟ್ಟು, ತನ್ನ ಕೋಟೆಯಲ್ಲಿ ಸುರಕ್ಷಿತರಾಗಿದ್ದ ದೊಡ್ಡಪ್ಪ ನವರನ್ನು ನೀನಾಗಿ ನೀನು ಆ ಪತಿತನಿಗೆ ತುತ್ತುಮಾಡುವುದು ನೀಚಾತಿನೀಚವಲ್ಲವೇ? ಏತಕೀರೀತಿಮಾಡಿದೆ? ಅಂತ್ಯವಲ್ಲಿ, ಯಾವವರು ನಿರ್ವೀರ್ಯರಾದಂತೆ ಈ ಹೊತ್ತಿಗೆ ಪಾಳೆಯಗಾರರು ನಿಶ್ಶಕ್ತರಾಗಿ ನೋಡುತಕೂತರೇಯೇನು? ಇಲ್ಲವಾದರೆ ನೀನು ಬಾರದೇ ನಿಲ್ಲಲು ಕಾರಣವೇನು? ನಿನ್ನ ಔದಾರ್ಯವೆಲ್ಲಿ ಹೋಯಿತು? ಪ್ರತಿಜ್ಞೆಯನ್ನೇನು ಮಾಡಿದೆ? ಇಷ್ಟು ಜನರ ಮರಣವನ್ನು ನಾನು ಕಣ್ಣಾರೆ ನೋಡಬೇಕಾಯಿತು. ಇವೆಲ್ಲಕ್ಕೂ ನಾನೇ ಮೂಲಕಾರಣ ಳಾದೆನು. ನಾನೊಂದು ನೆನೆದರೆ ದೈವವು ಬೇರೊಂದು ಮಾಡಿತು. ದೈವವೇ ನನ್ನಮೇಲೆ ಮುನಿದಂತೆ ಕಾಣುತ್ತದೆ.

"ಹಾ! ಜಗದ್ರಕ್ಷಕಾ! ಪರಮೇಶಾ! ನನ್ನಲ್ಲಿ ನೀನೇತಕ್ಕಿಂತು ನಿರ್ದಯನಾದೆ? ನಾನು ನಿನಗೆ ಮಾಡಿದ ಅಪರಾಧವಾದರೂ ಏನು? ಹಗಲಿರುಳು ನಿನ್ನ ನಾಮಸ್ಮರಣೆಯಲ್ಲಿರುವೆನೇ. ನನ್ನ ಮೇಲೆ ನಿನ ಗೇತಕ್ಕೆ ಇಷ್ಟು ಕಾಠಿಣ್ಯ. ಮರಣಕಾಲದಲ್ಲಿ "ಶಿವ" ಎಂದು ನುಡಿದ ಕಳ್ಳನಿಗಿಂತಲೂ ನಾನು ನಿನ್ನ ದೃಷ್ಟಿಗೆ ದೂರಳಾದೆನೇ? ಕಾಲಿಲಿ ಒದೆದ ಕನ್ನಪನಿಗಿಂತಲೂ ಕಡೆಯಾದೆನೇ? ದೀನಬಂಧೂ? ದಯಾಪರಾ? ನಾನೆಷ್ಟು ಪಾಪಿಯಾದರೂ ನಿನ್ನನ್ನು ನಂಬಿರುವ ಭಕ್ತಳು. ಅನಾಥೆಯು. ನಿರ್ದಯನಾಗಬೇಡ. ಕಾಪಾಡು."

ಹೀಗೆಂದು ಪ್ರಾರ್ಥಿಸುತ್ತಿದ್ದ ರಾಜಕುಮಾರಿಯ ಬಳಿಗೆ ಗೆಳತಿಯರು ಬಂದು "ಅಮ್ಮನವರೇ! ಇನ್ನೂ ತಡಮಾಡುತ್ತಿರುವಿರೇಕೆ? ಮಂಗಳಸ್ನಾನವನ್ನು ಮಾಡಿ ದಿವ್ಯಾಂಬರ ಭೂಷಣಗಳನ್ನು ಧರಿಸಿ ಮದುಮಗಳಾಗಬೇಕಲ್ಲವೇ. ಇಂಥಾ ಸಂತೋಷ ಸಮಯದಲ್ಲಿ ನೀವು ಇಷ್ಟು ವಿಷಾದದಿಂದಿರಲು ಕಾರಣವೇನು? ತಂದೆತಾಯಿಗಳಿಲ್ಲದೇ ಹೋದರೆಂಬ ಸಂಕಟವು ನಿಮಗಿದ್ದೀತು. ಅದನ್ನೀಗ ನೀವು ನುಂಗಿಕೋಬೇಕು. ನೀವು ಸಂತಾಪಪಟ್ಟರೆ ಅವರು ಬರಲಾರರು. ಅವರನ್ನು ಮರೆಯಿಸಿ, ದೊಡ್ಡಪ್ಪ-ದೊಡ್ಡಮ್ಮನವರು ವಿವಾಹಕಾರ್ಯವನ್ನು ನಡೆಸಲು ನಿಂತಿರುವರು. ಪುರಜನರೆಲ್ಲರೂ ಆನಂದಭರಿತರಾಗಿರುವರು. ನೀವು ಚಿಂತೆಮಾಡುತ್ತಾ ಕೂತರೆ ಬಸಪ್ಪನಾಯಕನವರಿಗೆ ಉತ್ಸಾಹಭಂಗವಾಗುವುದು. ಏಳಿರಿ. ಮುಂದಿನ ಕಾರ್ಯಕ್ರಮಕ್ಕನುವಾಗುವ. ನಿಮಗೆ ಬೇಕಾದ ಅಂಬರಗಳನ್ನು ತೆಗೆದುಕೊಳ್ಳಿರಿ. ಆಭರಣಗಳು ಬೇಕಾದಷ್ಟು ಇವೆ." ಎಂದು ಹೇಳಿದರು.

**ಲಾವಣ್ಯವತಿ** :— ಅಯ್ಯೋ! ಗೆಳತಿಯರೇ! ಇಂಥಾ ಆಭರಣಗಳನ್ನು ಬಯಸುವಳೇ ನಾನು?

**ಗೆಳತಿ** :— ಮತ್ತೇನು ಬೇಕು?

**ಲಾವಣ್ಯವತಿ**:— ನನಗೆ ಸರ್ವಸಂಪತ್ತಾದ ರಾಮನಾಯಕನ ಸುಳುವು ಇದುವರಿವಿಗೂ ಇಲ್ಲದೇ ಹೋಯಿತು.

**ಗೆಳತಿ** :— ಏನೆಂದಿರಿ? ರಾಮನಾಯಕನು ಇಲ್ಲಿಗೆ ಬಂದ ವಾರ್ತೆ ತಮಗೆ ತಿಳಿಯಲಿಲ್ಲವೇ?

**ಲಾವಣ್ಯವತಿ**:— ಏನು! ಏನು! ನಿಜವಾಗಿಯೂ ರಾಮನಾಯಕನು ಬಿಜಯಂಗೈದಿರುವನೇ?

**ಗೆಳತಿ**:— ನಿಜವಾಗಿ ಬಂದಿರುವನು.

**ಲಾವಣ್ಯವತಿ** :— ನಾನು ನಂಬಲಾರೆನು. ಬಸವೇಶ್ವರನ ಶಿಖರವನ್ನು ಹತ್ತಿ ದೃಷ್ಟಿಬೀಳುವವರೆಗೂ ರತ್ನಗಿರಿ ಮಾರ್ಗವನ್ನು ನೋಡಿದೆನು. ನನ್ನ ಕಣ್ಣಿಗೆ ಬೀಳಲೇ ಇಲ್ಲ.

**ಗೆಳತಿ**:— ಅವರು ರತ್ನಗಿರಿ ಮಾರ್ಗದಲ್ಲಿ ಎಂತು ಕಾಣ ಬಂದಾರು. ವೇಲ್ಹಂಡೆಗೆ ಬರುವೆನೆಂದು ಬಸಪ್ಪನಾಯಕನವರಿಗೆ ಬರೆದಿದ್ದರಂತೆ. ಅದೇರೀತಿ ಮೊದಲು ಅಲ್ಲಿಗೆ ಹೋಗಿ, ಬಸಪ್ಪ ನಾಯಕನವರು ಇಲ್ಲಿಗೆ ಬಂದದ್ದು ತಿಳಿದು, ವೇಲ್ಹಂಡೆಯಿಂದ ಇಲ್ಲಿಗೆ ಬಂದಿರುವರು.

**ಲಾವಣ್ಯವತಿ**:— ಯಾವಮಾರ್ಗದಿಂದಲೇ ಬರಲಿ. ಹನ್ನೆರಡು ಸಾವಿರ ಸೈನ್ಯದ ಗಲಭೆಯಾದರೂ ತದೇಕಚಿತ್ತಳಾಗಿ ಆಲಿಸುತ್ತಿದ್ದ ನನ್ನ ಕಿವಿಗೆ ಬೀಳದೇ ಹೋಯಿತೇ ?

**ಗೆಳತಿ**:— ರಾಮನಾಯಕನು ತನ್ನ ಹನ್ನೆರಡು ಸಾವಿರ ಸೈನ್ಯವನ್ನು ತರಲಿಲ್ಲ.

**ಲಾವಣ್ಯವತಿ**:—ಅಯ್ಯೋ, ಸಖೀ! ಏನು? ಈ ರೀತಿ ಹೇಳುವೆ? ರಾಮನಾಯಕನು ಹುಲಿಯೊಡನೆ ಚಲ್ಲಾಟವಾಡಲು ಹತ್ತಿದನೇನು ? ಆತನ ಹನ್ನೆರಡು ಸಾವಿರ ದಂಡೂ ನಮ್ಮ ಸೈನ್ಯವೂ ಒಕ್ಕಟ್ಟಾದರೂ ನರಸನಾಯಕನನ್ನು ಹಿಮ್ಮೆಟ್ಟಿಸುವದು ಸುಲಭಸಾಧ್ಯವಲ್ಲ. ಹೀಗಿರುವಾಗ, ರಾಮನಾಯಕನು ಎಂಥಾ ಸಾಹಸ ಮಾಡಿದಂತಾಯಿತು. ನಮ್ಮ ಭಟರಾದರೋ ರಾಮನಾಯಕನ ಬೆಂಬಲವಿರುವದೆಂಬ ಭರವಸೆಯಿಂದ ಯುದ್ಧಕ್ಕೆ ನಿಂತಿರುವರು. ಇಂಥಾ ನಿರುತ್ಸಾಹಕರವಾದ ವಾರ್ತೆಯು ಕಿವಿಗೆ ಬಿದ್ದೊಡನೆಯೋ ಹೇಳಿಕೇಳದೆ ಕಾಲಿಗೆ ಬುದ್ಧಿ ಹೇಳುವರು.

**ಗೆಳತಿ**:—ಈ ಶುಭ ಸಮಯದಲ್ಲಿ ನರಹತ್ಯೆಯು ಇರಬಾರದೆಂದು ರಾಮನಾಯಕನ ಕೋರಿಕೆ.

**ಲಾವಣ್ಯವತಿ**:—ಯುದ್ಧವಾಗಿ, ರಕ್ತದ ಕಾಲ್ವೆಯು ಹರಿಯದೇ ನನ್ನನ್ನು ರಕ್ಷಿಸುವದು ಅಸಾಧ್ಯವೆಂದು ಆತನಿಗೇತಕ್ಕೆ ತಿಳಿಯದೇ ಹೋಯಿತು. ಆತನಿಗೆ ಆಪ್ತರಾದವರು ದಾರಾದರೂ ಹೇಳದೇ ಹೋದರೇ ? ಎಂಥಾ ಪ್ರಳಯವು ಒದಗಿದಂತಾಯಿತು.

**ಗೆಳತಿ:**—ಅಮ್ಮನವರೇ! ಪ್ರಮಾದವೇನೂ ಬರಲಾರದು.

**ಲಾವಣ್ಯವತಿ:**—ಸಖೀ! ನನಗೆ ದಿಗಿಲು ಹೆಚ್ಚಾಯಿತು. ಮೈಮೇಲೆ ನಿಟ್ಟು ತಪ್ಪುವಂತಿದೆ. ಮುಂದೆ ಗತಿಯೇನು? ಕಂನ ಮನಸ್ಕನಾದ ನರಸನಾಯಕನು ಬಂದಾಗ್ಯೆ ನಮ್ಮೆಲ್ಲರಗತಿ ಯೇನೇ ನಾಗುವುದೋ? ಈ ಅಲ್ಪಸೈನದ ಪಾಡೇನು?

**ಗೆಳತಿ:**—ನರಸನಾಯಕನು ಬಂದಾಗಲಲ್ಲವೇ ಆ ಮಾತು.

**ಲಾವಣ್ಯವತಿ**—ಬರಪೇ ಬಿಡುವನೇ? ಇದು ಏನುಮಾತು?

**ಗೆಳತಿ:**—ಬರಗೊಡಿಸುವವರಾರು?

**ಲಾವಣ್ಯವತಿ:**—ನಿನ್ನ ಮಾತಿನ ಅರ್ಥವು ನನಗೆ ತಿಳಿಯಲಿಲ್ಲ ಬರದಂತೆ ನಿಲ್ಲಿಸುವರಾರು?

**ಗೆಳತಿ:**—ಅಂಥವರನ್ನು ನೇಮಿಸಿಯೇ ರಾಮನಾಯಕನು ವಿವಾಹಕ್ಕೆ ಬಂದಿರುವನು.

**ಲಾವಣ್ಯವತಿ**—ಯಾರನ್ನು ನಿಯಾಮಕಮಾಡಿರುವನು?

**ಗೆಳತಿ.**—ಹತ್ತುಸಾವಿರ ಸೈನ್ಯದೊಡನೆ ಭೀಮನಾಯಕನನ್ನು ವಾಗೊಂಡೆಯ ಸಮೀಪದಲ್ಲಿರೆಂದು ಕಳುಹಿಸಿರುವನು. ಮದೋನ್ಮತ್ತನಾದ ನರಸನಾಯಕನು ಅಟ್ಟಹಾಸದಿಂದ ಬರುವಾಗ್ಯೆ, ಹೊಂಚು ಹಾಕಿಕೊಂಡಿದ್ದು ಅವನ ಸೈನ್ಯದಮೇಲೆ ಬಿದ್ದು ಹಿಮ್ಮೆಟ್ಟಿಸುವನು. ಸಾಧ್ಯವಾದರೆ ಅವನ ಶಿರವನ್ನೇ ಕಡಿದುಬಿಡುವನು. ಎಂತಾದರೂ ನಮ್ಮಕಾರ್ಯಕ್ಕೆ ಭಂಗಬರಲಾರದು. ಮೂಹೂರ್ತಸಮಯಕ್ಕೆ ಅವನು ಇಲ್ಲಿಗೆ ಎಷ್ಟುಮಾತ್ರಕ್ಕೂ ಬರಲಾರನು. ಒಂದುವೇಳೆ ಭೀಮನಾಯಕನನ್ನು ಸೋಲಿಸಿದರೂ, ವಿವಾಹಾನಂತರ ಇಲ್ಲಿನವರೆಲ್ಲರೂ ಒಕ್ಕಟ್ಟಾಗಿ ನರಸನಾಯಕನನ್ನು ನಾಮಾವಶಿಷ್ಟನನ್ನಾಗಿ ಮಾಡದೇ ಬಿಡರು.

**ಲಾವಣ್ಯವತಿ**:—ಸಖೀ, ಈ ಮಾತು ನಿಜವಾದರೆ ನಿನ ಗೊಂದು ಮುತ್ತಿನಹಾರವನ್ನು ಕೊಡುವೆನು. ರಾಮನಾಯಕನು ಈಗ ಎಲ್ಲಿರುವನು ?

**ಗೆಳತಿ**:—ದೇವಿಯ ಆಲಯದಲ್ಲಿರುವನು. ಅವರನ್ನು ಇದಿರು ಗೊಂಡು ಕರೆತರಲು ಬಸಪ್ಪನಾಯಕನವರು ಸರ್ವಸನ್ನಾಹವನ್ನು ಮಾಡುತ್ತಿರುವರು. ನಾವಿನ್ನು ತಡಮಾಡಬಾರದು. ಹೋಗುವ.

ಲಾವಣ್ಯವತಿಯು ಸಂತೋಷದಿಂದ ಹಿಗ್ಗಿದಳು. ನಾಚಿಕೆ ಯಿಂದ ತಲೆಬಾಗಿಸಿದಳು. ಸಖಿಯರು ಆಕೆಯನ್ನು ಅನುನಯಿಸಿ ಸುದುಮುಗಳನ್ನು ಮಾಡಲು ಕರೆದೊಯ್ದರು.



## ೯ನೆಯ ಪ್ರಕರಣ.

ಭೀಮನಾಯಕನಿಗೆ ಪತ್ರವನ್ನು ಕಳುಹಿಸಿ ನರಸನಾಯಕನು ತನ್ನ ಬಿಡಾರದಲ್ಲಿ ಕಣ್ಣಿಗೆ ನಿದ್ದೆಯಿಲ್ಲದೇ ಕುಳಿತಿದ್ದನು. "ನಾನು ಬೀಸಿರುವ ಒಲೆಗೆ ಅವನು ಮೈಮರೆದು ಬೀಳುವನೋ, ಎಚ್ಚತ್ತು ನನ್ನ ಉಪಾಯವನ್ನು ಗ್ರಹಿಸಿ, ಹೀಯಾಳಿಸುವನೋ" ಎಂಬ ಆಲೋಚನೆಯಲ್ಲಿ ಮಗ್ನನಾಗಿದ್ದನು. ತನ್ನ ಚಾರರ ದಾರಿಯನ್ನೇ ಇದಿರು ನೋಡುತ್ತಿದ್ದನು. ಅವರು ಬರುವದು ಆಲಸ್ಯವಾಗಲು ಸ್ವಲ್ಪ ಸಮಾಧಾನಮಾಡಿಕೊಂಡನು. ಕಾರ್ಯವು ತನಗೆ ಪ್ರತಿಕೂಲವಾಗುವ ಸಂಭವವಿದ್ದರೆ, ಚಾರರು ಅಷ್ಟು ವಿಳಂಬ ಮಾಡುತ್ತಿರಲಿಲ್ಲ. ಅನುಕೂಲ ಮಾಡಿಕೊಂಡು ಬರುವರೆಂದು ಅವನ ಆಶೆ. ಕೊನೆಗೆ ಭೃತ್ಯರು ಭೀಮನಾಯಕನ ಪ್ರತ್ಯುತ್ತರವನ್ನು ತೆಗೆದುಕೊಂಡು ಬಂದರು. ಅತ್ಯಾತುರದಿಂದ ನರಸನಾಯಕನು ಅದನ್ನು ತೆಗೆದುಕೊಂಡು ತನ್ನಲ್ಲಿ ತಾನು ಪಠಿಸಿಕೊಂಡನು.

"ಎಲೋ, ನರಸನಾಯಕಾ! ಬೇವು ಬಿತ್ತಿದರೆ ಮಾವು ಬೆಳೆದೀತೇ? ನೀಚ ಜಾತಿಯವಳ ಹೊಟ್ಟೆಯಲ್ಲಿ ಹುಟ್ಟಿದ ನಿನಗೆ ಇಂಥಾ ಅಲ್ಪಾಲೋಚನೆಗಳಲ್ಲದೆ ಬೇರೆ ಎಲ್ಲಿಂದ ಬರಬೇಕು. ಪಾಳೆಯಗಾರರ ಪಾದಸೇವೆಗೆ ಸಹಾ ನೀನು ಅರ್ಹನಲ್ಲವೆಂಬುವದು ಮರೆತು, ಅವರ ಸರಿಯವನಂತೆ ಅಭಿನಯಿಸಿದಷ್ಟು ಮಾತ್ರಕ್ಕೆ ಪ್ರಪಂಚವು ಮೋಸಹೋಗುವುದೆಂದು ತಿಳಿದೆಯಾ? ಧನದಾಶೆ, ರಾಜ್ಯದಾಶೆ, ನಿನ್ನ ಮಗಳ ಆಶೆಯನ್ನು ನನಗೆ ತೋರಿಸಿ, ಸ್ವಾಮಿದ್ರೋಹವನ್ನು ಮಾಡಿಸಿ, ಪಾಪಸೋಪಾನಗಳೊಂದೊಂದಾಗಿ ಇಳಿಸಿ, ನರಕ ಕೂಪದಲ್ಲಿ ನೂಕಲೆಣಿಸಿದೆಯಾ? ನಿನ್ನ ಕುತಂತ್ರಕ್ಕೆ ನಾನು ಬಲಿಯಾಗುವೆನೆಂದು ನಂಬಿದೆಯಾ? ಅದೆಲ್ಲವೂ ಒಣ ಭ್ರಾಂತಿ.

ನೀನೀಗ ಆಡುವುದು ಹೊಸ ನಾಟಕವಲ್ಲ. ಹಿಂದೆ ಒಂದಾವರ್ತಿ ಇದೇ ಅಸ್ತ್ರವನ್ನು ಪ್ರಯೋಗ ಮಾಡಿದ್ದೆ. ಅದಕ್ಕೆ ನಾನು

ಗುರಿಯಾಗಪೆ, ನಿನಗೆ ಮರ್ಯಾದೆಯಿಂದ ಬುದ್ಧಿ ಪತ್ರವನ್ನು ಕಳು ಹಿಸಿದೆನು. ಅಷ್ಟಕ್ಕೆ ಕಣ್ದೆರೆಯುವೆ, ಎಂದುಕೊಂಡೆನು. ಆ ಆಶೆಯು ನಿರಾಶೆಯಾಯಿತು. ನಿನಗೆ ತೋರಿಸಿದ ಗೌರವವು ನಿಷ್ಫಲ ವಾಯಿತು. ನಾಯಿಯನ್ನು ಸಿಂಹಾಸನದಮೇಲೇರಿಸಿದಂತಾಯಿತು.

ಇನ್ನಾದರೂ ಬುದ್ಧಿ ತಂದುಕೊಂಡು, ಲಾವಣ್ಯಾವತಿಯ ಮೇಲಿನ ಆಶೆಯನ್ನು ಬಿಟ್ಟು, ಹಿಂದಿರುಗಿ ಹೋಗು. ನಿನ್ನ ಕೋಟೆ ಯಲ್ಲಿ ನೀನು ಸುಖದಿಂದಿರು. ಇಲ್ಲವಾದರೆ, ನನ್ನನ್ನು ಗೆದ್ದು ನೀನು ಮುಂದಕ್ಕೆ ಅಡಿಯಿಡಬೇಕಾಗಲಿ, ರತ್ನಗಿರಿಯ ದಂಡಿನಲ್ಲಿ ಒಂದು ಜೀವಿಯು ಚೈತನ್ಯಸಹಿತವಾಗಿರುವವರೆಗೂ, ನಿನಗೆ ನಿಡುಗಲ್ಲಿಗೆ ಮಾರ್ಗ ದೊರೆಯಲಾರದು.

ಭೀಮನಾಯಕ.

ಇದನ್ನು ಓದುತ್ತಿರುವಾಗ ನರಸನಾಯಕನ ಮುಖದಲ್ಲಿ ಕೋಪವು ಉಕ್ಕಿಬರುವಂತಿತ್ತು. ಲಾವಣ್ಯಾವತಿಯ ಮೇಲಿನ ಆಶೆಯು ಕಡಿಮೆಯಾಯಿತು. ಭೀಮನಾಯಕನ ಮೇಲಿನ ಸಿಟ್ಟು ಹೆಚ್ಚಾ ಯಿತು. ನೈಮರೆದು ಮಲಗಿದ್ದ ರತ್ನಗಿರಿಯ ಸೈನ್ಯದ ಮೇಲೆ ಬಿದ್ದು, ಅವರನ್ನುಕೊಂದು ನಿಡುಗಲ್ಲಿಗೆ ದಾರಿಮಾಡಿಕೊಂಡು, ರಾತ್ರಿ ರಾತ್ರಿಯೇ ಪ್ರಯಾಣಮಾಡಿ, ರಾಮನಾಯಕನ ಲಗ್ನಕ್ಕೆ ವಿಘ್ನ ಮಾಡಬೇಕೆಂದು ನಿಶ್ಚಯಿಸಿಕೊಂಡನು. ತನ್ನ ಸೈನ್ಯವನ್ನು ಸಿದ್ಧ ಗೊಳಿಸಿ, ಎಲ್ಲರೂ ಒಮ್ಮೆಯೇ ಭೀಮನಾಯಕನ ಮೇಲೆ ಬೀಳ ಬೇಕೆಂದು ಆಜ್ಞೆಮಾಡಿದನು. ವಿಧಿಯಿಲ್ಲದೇ ಹೋದುದರಿಂದ ಸೈನಿಕರು ಆ ರೀತಿ ಮಾಡಿದರು.

ತನ್ನ ಪತ್ರವನ್ನು ಓದಿದೊಡನೆಯೇ ನರಸನಾಯಕನಿಗೆ ಉನ್ಮಾ ದವು ತಲೆಗೇರುವುದೆಂದು ಭೀಮನಾಯಕನು ಬಲ್ಲನು. ಆದುದರಿಂದ ತನ್ನ ಸೈನ್ಯವನ್ನು ಎಚ್ಚರಗೊಳಿಸಿದನು. ಹಗೆಗಳು ಮೇಲೆ ಬಿದ್ದೊ ಡನೆಯೇ ಆವೇಶಪೂರಿತನಾಗಿ ತಾನೇ ಮುಂದು ಬಿದ್ದು ಯುದ್ಧ

ಮಾಡಲು ಹತ್ತಿದನು. ಅದನ್ನು ನೋಡಿ ಆತನ ಸೈನಿಕರು ಸಹಾ ವಿಜೃಂಭಿಸಿದರು. ಕದಳಿಯುವನವನ್ನು ಮದಗಜವು ಹೊಕ್ಕಂತೆ, ಅವರು ಪೆನುಗೊಂಡೆಯವರನ್ನು ಧ್ವಂಶಗೊಳಿಸುತ್ತಿದ್ದರು. ನರಸನಾಯಕನು ಕಂಗೆಟ್ಟು ನೋಡುತ್ತಿದ್ದನು. ತನ್ನ ಭಟರು ರತ್ನಗಿರಿಯವರ ಹೊಡೆತಕ್ಕೆ ತಾಳಲಾರದೆ ಹಿಂದಿರುಗಿ ಪಲಾಯನ ಮಾಡಿದರು. ಅವರೊಡನೆ ತಾನು ಕೂಡ ಯುದ್ಧರಂಗವನ್ನು ಬಿಟ್ಟು ಒಂದಕ್ಕೆ ಹೋದನು. ಪೆನುಗೊಂಡೆಯಿಂದ ತನ್ನ ಹತ್ತುಸಾವಿರ ಸೈನ್ಯವು ಬಂದನಂತರ ಯುದ್ಧವನ್ನು ಮಾಡಲೆಣಿಸಿ ಆ ದಾರಿಯನ್ನು ನೋಡುತ್ತಲಿದ್ದನು. ಚಾರರನ್ನು ಕಳುಹಿಸಿ ಅವರನ್ನು ಬೇಗ ಬರಹೇಳಿದನು.

ಭೀಮನಾಯಕನು ವೈರಿಯ ಪರಾಜಯವು ಸಂಪೂರ್ಣವಾಯಿತೆಂದೆಣಿಸಿ, ರಾಮನಾಯಕನಿಗೆ ಆ ಸುವಾರ್ತೆಯನ್ನು ತಿಳುಹಿಸಲು ಚಾರರನ್ನು ಕಳುಹಿಸಿದನು. ವಿವಾಹಾನಂತರ ನಿಡುಗಲ್ಲು ರಾಜ್ಯವು ತನ್ನದಾಗುವದೆಂಬ ಹಿಗ್ಗಿನಿಂದಿದ್ದನು. ತನ್ನವರೆಲ್ಲರೂ ಭೋಜನಗೈದು, ಯುದ್ಧಾಯಾಸವನ್ನು ತೀರಿಸಿಕೋಬಹುದೆಂದು ಆಜ್ಞೆ ಮಾಡಿದನು. ಅದೇ ಪ್ರಕಾರ ಸೈನಿಕರೆಲ್ಲರೂ ಆಯುಧಗಳ ಕೆಲಸ ಪೂರಯಿಸಿತೆಂದು ಅವುಗಳನ್ನು ಒರೆಗಳಲ್ಲಿಟ್ಟು, ವಿಜಯೋತ್ಸಾಹದಿಂದಿದ್ದರು ನರಸನಾಯಕನು ಮತ್ತೊಮ್ಮೆ ತಮ್ಮನ್ನು ಕೆಣಕುವನೆಂಬ ಅನುಮಾನವು ಅವರಿಗೆ ಕಿಂಚಿತ್ತಾದರೂ ಇರಲಿಲ್ಲ.

ಸಮರದ ಶ್ರಮೆಯು ತೀರಿದನಂತರ, ಸರ್ವರೂ ಪೆನುಗೊಂಡೆಗೆ ಪ್ರಯಾಣಮಾಡಿದರು. ತಮ್ಮ ಗೆಲುವಿನ ಸಂತೋಷವು, ಪರಾಕ್ರಮದ ಧೋರಣೆಯು, ಅರಸನು ಮಾಡಲಿರುವ ಸನ್ಮಾನದ ಯೋಚನೆಯು ಇಡೀ ಸೈನ್ಯದಲ್ಲಿ ಕಾಣಬಂದುವು. ಮೆಲ್ಲನೆ ನಿಡುಗಲ್ಲಿನ ಕಡೆಗೆ ಕದಲುತ್ತಿದ್ದರು. ನರಸನಾಯಕನು ಇದೆಲ್ಲವನ್ನು ಗುಪ್ತಚಾರರಿಂದ ತಿಳಿದುಕೊಳ್ಳುತ್ತಿದ್ದನು. ತನ್ನ ಹೊಸಸೈನ್ಯವು ಬಂದಕೂಡಲೆ ವೈರಿಗಳನ್ನು ಬೆನ್ನಟ್ಟಿದನು. ಸರ್ವರೂ ನಿಶ್ಶಬ್ದವಾಗಿ

ನಡೆಯಬೇಕೆಂದು ಆಜ್ಞೆಮಾಡಿದನು. ಆಯುಧಹಸ್ತರಾಗಿದ್ದು, ಹಗೆಗಳ ಸೈನ್ಯವು ಕಣ್ಣಿಗೆ ಬಿದ್ದಕೂಡಲೆ, ಹಿಂಭಾಗದಲ್ಲಿಯೂ, ಎಡ ಬಲಗಳಲ್ಲಿಯೂ, ಅವರ ಮೇಲೆ ಕವಿದು ಚಂಡಾಡಬೇಕೆಂದು ಹೇಳಿದನು. ಭೀಮನಾಯಕನನ್ನು ಸೆರೆಹಿಡಿದು ತರಬೇಕೆಂದು ಅಪ್ಪಣೆಯಿತ್ತನು. ಪಾವಗಡದ ಕಾಡನ್ನು ದಾಟಿ ಬಯಲು ಸೀಮೆಗೆ ಭೀಮನಾಯಕನು ಬಿದ್ದರೆ, ತಮ್ಮ ಕಾರ್ಯವು ಕಷ್ಟಸಾಧ್ಯವೆಂದು ಅತಿ ಜಾಗ್ರತೆಯಿಂದ ಪ್ರಯಾಣಮಾಡುತ್ತಲಿದ್ದನು.

ಆ ಕಾಲದಲ್ಲಿ ಪಾವಗಡದಿಂದ ಸಿಡುಗಲ್ಲಿನ ಮಾರ್ಗವು ಗುಡ್ಡಗಾಡಿನಲ್ಲಿತ್ತು. ಹಿಂದಿದ್ದವರಿಗೆ ಮುಂದಿದ್ದವರು, ಮುಂದಿದ್ದವರಿಗೆ ಹಿಂದಿದ್ದವರು ಕಾಣಿಸದಂತಿತ್ತು. ಅಂಥಾ ಮಾರ್ಗದಲ್ಲಿ ಮೈಮರೆದು ಪ್ರಯಾಣಮಾಡುತ್ತಿದ್ದ ರತ್ನಗಿರಿಯ ಸೈನ್ಯದ ಮೇಲೆ ಏಕಾಏಕಿ ನರಸನಾಯಕನು ತನ್ನ ಹನ್ನೆರಡು ಸಾವಿರ ಬಲದೊಡನೆ ಬಿದ್ದನು. ಅವನಿಗೆ ಯುದ್ಧ ಧರ್ಮವು ಬೇಕಿರಲಿಲ್ಲ. ನ್ಯಾಯಾನ್ಯಾಯವು ಬೇಕಿರಲಿಲ್ಲ. ಪಾಪ ಪುಣ್ಯದ ಭೀತಿಯಿರಲಿಲ್ಲ. ತನ್ನ ಮೇಲೆ ನಿಷ್ಕಾರಣ ವೈರವನ್ನು ಬೆಳೆಯಿಸಿ, ಕೈಗೆಸಿಕ್ಕಿದ್ದ ಲಾವಣ್ಯವತಿಯನ್ನು ತಪ್ಪಿಸಿ, ತನ್ನನ್ನು ಹೀಯಾಳಿಸಿ, ತನ್ನ ಸೈನ್ಯವನ್ನು ಆಹುತಿಗೊಂಡಿದ್ದ ಭೀಮನಾಯಕನ ಮೇಲೆ ಸೇಡುತೀರಿಸಿಕೋಬೇಕೆಂಬುವ ಯೋಚನೆಯೊಂದೇ ಬೇಕಾಗಿತ್ತು. ವೈರಿಗಳು ನಿರಾಯುಧರಾಗಿರುವರೆಂಬುವುದು ಗೊತ್ತಿತ್ತು. ಅವರಿಂದ ತನಗೆ ಏನೊಂದು ಅಪಾಯವಿಲ್ಲವೆಂಬ ಭರವಸೆಯಿತ್ತು. ತನ್ನವರನ್ನು ಮುಂದಕ್ಕೆ ದಬ್ಬಿ, ತಾನು ಹಿಂಬಳಿಯದೇ ತಾನೇ ಮುಂದಾಳಾಗಿ ಮೋಸ ಯುದ್ಧವನ್ನು ಪ್ರಾರಂಭಿಸಿದನು. ಹಿಂಭಾಗದಿಂದ ಶತ್ರುಗಳಮೇಲೆಬಿದ್ದು ಕರುಣಾಶೂನ್ಯನಾಗಿ ಅವರನ್ನು ಕಡಿ-ಖಂಡ ಮಾಡುತ್ತಿದ್ದನು. ಅವನ ಸೈನಿಕರು ಕೆಲವರು ಒಡೆಯನನ್ನು ಅನುಸರಿಸಿದರು. ಮತ್ತೆ ಕೆಲವರು ಎರಡು ಭಾಗವಾಗಿ ಸೀಳಿ ಎಡಬಲದಿಂದ ರತ್ನಗಿರಿಯವರ ಮೇಲೆಬಿದ್ದರು.

ಪಾಪ! ರತ್ನಗಿರಿಯ ಸೈನಿಕರು ಏನು ಮಾಡಬಲ್ಲರು? ಒಬ್ಬರ ಗೋಳು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಕೇಳಿಸಿದರೂ ಅವರ ಗತಿ ತಮಗಾಗುವವರೆಗೂ ಕಾರಣವು ತಿಳಿಯುತ್ತಿರಲಿಲ್ಲ. ತಿಳಿದವರಿಗೆ ಏನು ಮಾಡಲೂ ತೋರುತ್ತಿರಲಿಲ್ಲ. ತಾವಾದರೋ ನಿರಾಯುಧರು. ಯುದ್ಧದ ಹಂಬಲವೇ ಹಚ್ಚಿಕೊಂಡಿರಲಿಲ್ಲ. ಭೀಮನಾಯಕನು ತಮ್ಮನ್ನು ಹಿಂದೆಬಿಟ್ಟು ಮುಂಪೆ ಹೋಗುತ್ತಿದ್ದನು. ತಮಗೆ ಸಲಹೆ ಹೇಳುವರೇ ಇರಲಿಲ್ಲ. ತಮ್ಮ ಗೋಳನ್ನು ಕೇಳುವವರು ಅಷ್ಟಕ್ಕೂ ಕಡಿಮೆ. ಶತ್ರುಗಳಿಗೆ ಕನಿಕರವೆಂಬುವದು ಶೂನ್ಯ. ಅವರ ಹೊಡೆತದಿಂದ ತಪ್ಪಿಸಿಕೊಂಡು, ಓಡಿಹೋಗಲು ಸಹಾ ಅವಕಾಶವಿರಲಿಲ್ಲ. ಅವರು ಕಟುಕರವನಕ್ಕೆಗೆಬಿದ್ದ ಕುರಿಗಳಂತೆ ಸುಮ್ಮನೆ ಸಾಯುತ್ತಿದ್ದರು. ನರಸನಾಯಕನೂ. ಅವನ ಸೈನ್ಯವೂ ಮತ್ತಿಷ್ಟು ಧೈರ್ಯದಿಂದ ಅವರನ್ನು ಬಲಿಗೊಳ್ಳಲು ಹತ್ತಿದರು.

ಮುಂದಿನ ಭಾಗದಲ್ಲಿ ಅಶ್ವಾರೂಢನಾಗಿ ಹೋಗುತ್ತಿದ್ದ ಭೀಮನಾಯಕನಿಗೆ ಇದೊಂದೂ ಗೊತ್ತಾಗಲಿಲ್ಲ. ನರಸನಾಯಕನು ಮತ್ತೊಮ್ಮೆ ತನ್ನನ್ನು ಕೆಣಕಲು ಸಾಹಸಮಾಡುವನೆಂಬ ಅನುಮಾನವು ಆತಗೆ ಕನಸಿನಲ್ಲಾದರೂ ಇರಲಿಲ್ಲ. ಯುದ್ಧದಲ್ಲಿ ಜಯವನ್ನು ಹೊಂದಿದ್ದ ಹಿಗ್ಗು, ಸ್ವಾಮಿಕಾರ್ಯವನ್ನು ನಿರ್ವಿಘ್ನವಾಗಿ ಜರಿಗಿಸಿದೆನೆಂಬ ಸಂತೋಷವೂ, ನಿಡುಗಲ್ಲಿಗೆ ರಾಜನಾಗುವೆನೆಂಬ ಆಶೆಯೂ ಒಂದುಕಡೆ; ತನ್ನ ಇಹಲೋಕದ ಸೌಖ್ಯಕ್ಕೆ ಆಧಾರವೂ, ಪರಲೋಕದ ದಾರಿಗೆ ಸೋಪಾನವೂ ಆಗಿದ್ದ ಅರ್ಧಾಂಗಲಕ್ಷ್ಮಿಯು ರಂಗನಾಯಕಿಯು ಇಲ್ಲದ ಯಾವಸೌಖ್ಯವು ತನಗೇತಕ್ಕೆಂಬ ನಿರುತ್ಸಾಹವು ಮತ್ತೊಂದುಕಡೆ, ಆತನ ಮನಸ್ಸನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿದ್ದುವು. ಒಬ್ಬಿಬ್ಬರು ಭಟರು ದಾರಿ ತೋರಿಸುತ್ತಾ ಮುಂದೆ ಹೋಗುತ್ತಿರಲು ಕುದುರೆಯು ಆ ದಾರಿಯಲ್ಲಿ ಹೋಗುತ್ತಿತ್ತು. ಆತನು ಕುರುಡನಂತೆ ಅದು ತೆಗೆದುಕೊಂಡು ಹೋದಕಡೆ ಹೋಗುತ್ತಿದ್ದನು.

ಭೀಮನಾಯಕನು ಒಂದಾವರ್ತಿಯಾದರೂ ಹಿಂದಕ್ಕೆ ತಿರುಗಿ ನೋಡಿದವನಲ್ಲ. ತನ್ನ ಸೈನ್ಯದ ಆರ್ತನಾದವು ಅವನ ಕಿವಿಗೆ ಬೀಳ ಲಿಲ್ಲ. ಪೆನುಗೊಂಡೆಯವರು ರತ್ನಗಿರಿಯವರನ್ನು ಕಡಿಕಡಿದು ಕೆಡವಿ, ಬಿದ್ದವರ ಹೆಣಗಳ ಮೇಲೆ ಅಡಿಯಿಡುತ್ತ ಮುಂದಕ್ಕೆ ಸಾಗುತ್ತಿದ್ದರು. ಭೀಮನಾಯಕನ ದಂಡು ಒಂಪೆರಡುನೂರು ಮಾತ್ರ ಸಿಂತಿತ್ತು. ಅವರು ತಮ್ಮ ದುಸ್ಥಿತಿಗೆ ಕಂಗೆಟ್ಟು, ಆತನಿಗೆ ತಮ್ಮಗೋಳು ಹೇಳಿ ಕೊಳ್ಳಲು ಒಂದೇ ಓಟದಿಂದ ಬರುತ್ತಿದ್ದರು. ಅವರ "ಹಾ ಹಾ" ಕಾರವು ಕೊನೆಗೆ ಆತನ ಕಿವಿಗೆ ಬಿತ್ತಾಗಲಿ, ಉತ್ಸಾಹ ಭರಿತವಾದ ತನ್ನ ದಂಡಿನ ಕೋಲಾಹಲವಿರಬಹುದೆಂದು ಭಾವಿಸಿದನು. ಅವರ ಗತಿ ಆ ರೀತಿ ಯಾಗಿದ್ದದ್ದು ಬಹಳ ಹೊತ್ತಿನವರೆಗೂ ಆತಗೆ ಗೋಚ ರಿಸಲಿಲ್ಲ. ಕೊನೆಗೆ ಎಚ್ಚತ್ತನಾಗಲಿ, ಫಲವೇನು? ತನ್ನವರೊಬ್ಬ ರಾದರೂ ಮಿಕ್ಕಿರಲಿಲ್ಲ. ಸರ್ವರನ್ನೂ ನಾಶಗೊಳಿಸಿ ಶತ್ರುಗಳು ತನ್ನ ಮೇಲೆ ಕವಿದು ಬರುತ್ತಿದ್ದರು. ಆತನಿಗೆ ಆಗ ನಿಜಸ್ಥಿತಿಯು ಸ್ಪಷ್ಟವಾಯಿತು. ಬೆನ್ನಟ್ಟಿಬಂದ ಶತ್ರುಗಳು ಸಮೀಪದಲ್ಲಿಯೇ ಯಿದ್ದರು ಆ ದುರ್ಗಮಕಾನನಮಧ್ಯದಲ್ಲಿ ತಡಮಾಡಿದರೆ ಅವರಿಗೆ ತುತ್ತಾಗುವುದು ನಿಜವೆಂದು ಗ್ರಹಿಸಿದನು. ಕುದುರೆಯನ್ನು ಮುಂದಕ್ಕೆ ಹಾರಿಸಿ ಸಿಡುಗಲ್ಲು ಮಾರ್ಗಹಿಡಿದು ಒಂದೇ ಓಟ ಓಡಿಸಿದನು.

ನರಸನಾಯಕನ ಸಂತೋಷಕ್ಕೆ ಪಾರವೇ ಇರಲಿಲ್ಲ. ತನ್ನ ದಾರಿಗೆ ಅಡ್ಡ ಯಾರುಯಾರೂ ಇರಲಿಲ್ಲ. ಸಿಡುಗಲ್ಲು ಯಾವಾಗ ಸೇರಲಿ, ರಾಮನಾಯಕನನ್ನು ಯಾವಾಗ ಕೊಲ್ಲಲಿ, ಲಾವಣ್ಯವತಿ ಯನ್ನು ಯಾವಾಗ ಸೆರೆಹಿಡಿದು ಪೆನುಗೊಂಡೆಗೆ ಒಯ್ಯಲಿ ಎಂದು ಆತುರ ಪಡುತ್ತಿದ್ದನು. ತನ್ನ ಸೈನ್ಯವನ್ನು ತ್ವರಿತಗೊಳಿಸಿದನು.

ರತ್ನಗಿರಿ ಸೈನ್ಯವೆಲ್ಲವೂ ನಾಶವಾಗಿತ್ತು. ಸಿಡುಗಲ್ಲಿನವರು ಎಂದೋ ತನ್ನ ಕರವಾಲಕ್ಕೆ ಆಹುತಿಯಾಗಿ ಹೋಗಿದ್ದರು. ಇನ್ನು ತನಗೆ ಎದುರು ಬರುವವರು ಯಾರೂಯಿಲ್ಲವೆಂಬ ಭರವಸೆಯಿಂದ ಸೈನ್ಯದೊಡನೆ ಮುಂದಕ್ಕೆ ಪ್ರಯಾಣಮಾಡಿದನು.

ಭೀಮನಾಯಕನು ಆ ರೀತಿ ಕುದುರೆಯನ್ನು ಓಡಿಸಿಕೊಂಡು ಪ್ರಾಣದೊಡನೆ ಸಿಡುಗಲ್ಲು ಮಾರ್ಗದ ಬಯಲು ಸೀಮೆಗೆ ಬಿದ್ದನು. ಮಾರ್ಗಮಧ್ಯದಲ್ಲಿ ಯಾವದೊಂದು ಯೋಚನೆಯೂ ಆತಗೆ ಹರಿಯದೆ ಹೋಗಿತ್ತು. ನರಸನಾಯಕನು ಮೋಸದವನಟ್ಟೆ ಎಂದು ಆತನು ಬಲ್ಲನು. ಗುಡ್ಡಗಾಡಿನಲ್ಲಿ ನಿಂತರೆ, ಯಾವದಿಕ್ಕಿನಿಂದ ಏನು ಅಪಾಯ ಬರುವದೋ ಎಂದು ಆತಗೆ ದಿಗುಲಿದ್ದಿತು. ಬಯಲು ಭೂಮಿಯಲ್ಲಿ ಒಂದು ಮೈಲುದೂರ ಪ್ರಯಾಣಮಾಡಿದನಂತರ ಕುದುರೆಯನ್ನು ನಿಲ್ಲಿಸಿ, ಹಿಂದಕ್ಕೆ ತಿರುಗಿ ನೋಡಿದನು. ನರಸನಾಯಕನ ಭಟರು ಕಾಡನ್ನು ಬಿಟ್ಟು ಒಬ್ಬೊಬ್ಬರೇ ಹೊರಗೆ ಬೀಳುತ್ತಿದ್ದರು. ಆತನೊಡನೆ ಬಂದಿದ್ದ ಸೈನ್ಯದಲ್ಲಿ ಒಂದೆರಡು ನಾವಿರವನ್ನು ಮಾತ್ರ ತನ್ನವರು ಪ್ರಾಣದಿಂದ ಬಿಟ್ಟಿದ್ದರು. ಹಶರೀಷರಾದವರು ನಿರುತ್ಸಾಹಿಗಳಾಗಿದ್ದರು. ಗಿಡಮರಗಳನ್ನು ಮರೆಮಾಡಿಕೊಂಡು ಹೇಡಿಗಳಂತೆ ತನ್ನವರನ್ನು ಕಡಿದು ಹಾಕಿದ್ದರಾಗಲೀ ಬಲಪರಾಕ್ರಮಗಳಿಂದಲ್ಲವೆಂದು ಆತನು ಯೋಚಿಸಿದನು. ತಾನೋರ್ವನೇ ಆದರೂ ಆ ಬಯಲು ಮಾರ್ಗದಲ್ಲಿ ಮತ್ತೊಮ್ಮೆ ಅವರನ್ನು ಅಡ್ಡಹಾಕಿ ಹಿಂದಿರುಗಿಸುವೆನೆಂಬ ಧೈರ್ಯವು ಆತನಿಗಿತ್ತು. ಮುಂದಕ್ಕೆ ಎಷ್ಟು ಮಾತ್ರಕ್ಕೂ ಬಿಡಬಾರದೆಂದು ನಿಶ್ಚಯಿಸಿಕೊಂಡು ನೋಡುತ್ತಿದ್ದನು.

ಆದರೆ ಆ ಅಡವಿಯ ಮಾರ್ಗದಿಂದ ಹೊರಬಿದ್ದದ್ದು ತಾನು ಅಂದುಕೊಂಡಂತೆ ಒಂದೆರಡುಸಾವಿರ ಸೈನ್ಯವಲ್ಲ; ಅಗಣಿತವಾಗಿತ್ತು. ಎಷ್ಟುಹೊತ್ತು ನೋಡಿದರೂ ಹೊರಬೀಳುತ್ತಲೇ ಇತ್ತು; ಸಮುದ್ರದ ತೆರೆಗಳಂತೆ ಮೇಲೆ ಮೇಲೆ ಬರುತ್ತಲೇ ಇತ್ತು; ಭೂಮಿಯು ಹಡೆದಿತೋ ಎಂಬ ಭ್ರಮೆಯನ್ನುಂಟುಮಾಡುತ್ತಿತ್ತು. ಒಂದೆರಡು ಸಾವಿರ ಸೈನ್ಯಕ್ಕೆ ಬದಲು ಹತ್ತುಹನ್ನೆರಡು ಸಹಸ್ರ ದಂಡು ಮುಂದಕ್ಕೆ ನಾಗಿ ಬರುತ್ತಿತ್ತು. ಭೀಮನಾಯಕನು ಆಶ್ಚರ್ಯಗೊಂಡನು ಆ ಸೈನ್ಯವು ಎಲ್ಲಿ ಅಡಗಿದ್ದದ್ದೂ ಊಹಿಸಲಾರದೆ ಹೋದನು. ನರಸನಾಯಕನ ಚತುರತೆಗೆ ಮೆಚ್ಚಿದನು. "ಆದರೇನು ? ಅದು ವೀರಧರ್ಮವೇ" ಎಂದು ಹೀಯಾಳಿಸಿದನು.

ಆ ಸಮಯದಲ್ಲಿ ತನ್ನ ಕರ್ತವ್ಯವು ಒಂದೇ ಎಂದು ನಿರ್ಧಾರ ಮಾಡಿಕೊಂಡನು. ತಾನು ಪ್ರಾಣದಿಂದಿದ್ದು ನರಸನಾಯಕನನ್ನು ಮುಂದಕ್ಕೆ ಬಿಡುವುದು ಸುಳ್ಳು. ಅಷ್ಟೊಂದು ದಂಡನ್ನು ಅಷ್ಟುಹೊತ್ತು ನಿಲ್ಲಿಸುವುದು, ಒಬ್ಬನಕೈಲಾಗದ ಕಾರ್ಯವೆಂಬುವದು ವಿದಿತವಾಯಿತು ತಾನು ಈ ಪ್ರಪಂಚದಲ್ಲಿರುವದು ಕೊಂಚಕಾಲವೇ ಎಂಬುವದು ನಂಬುಗೆಯಾಯಿತು. ಒಂದುಮರದ ನೆರಳಲ್ಲಿ ಕುದುರೆಯನ್ನು ನಿಲ್ಲಿಸಿ, ಬರುತ್ತಿದ್ದ ಸೈನ್ಯದಕಡೆ ನೋಡುತ್ತಿದ್ದನು. ಕ್ಷಣಕಾಲ ಕುದುರೆಗೆ ವಿಶ್ರಾಂತಿ ಕೊಡಬೇಕೆಂದಿದ್ದನು.

ನರಸನಾಯಕನ ದೃಷ್ಟಿಯು ಅಶ್ವಾರೂಢನಾಗಿ ಮರದ ನೆರಳಲ್ಲಿ ನಿಂತಿದ್ದ ಈ ಯುವಕನ ಮೇಲೆಯೇ ಇತ್ತು. ಆತನು ಭೀಮನಾಯಕನೆಂದು ಗುರ್ತಿಸಿದನು. ಆದರೆ ಮತ್ತೊಮ್ಮೆ ತನಗೆ ಎದುರು ಬೀಳುವನೆಂದು ಅನುಮಾನಿಸಲಿಲ್ಲ ಒಂಟಿಗನಾಗಿ ತಾನೇನು ಮಾಡಬಲ್ಲನೆಂಬ ಅಹಂಕಾರವು ಆವರಿಸಿತ್ತು. ಭೀಮನಾಯಕನು ಮಹಾ ತನ್ನಂಥಹ ರಣಹೇಡಿ ಎಂದು ತಿಳಿದಿದ್ದನು. ಕೊನೆಗೆ ಆಶಾಭಂಗವಾಯಿತು.

ದಂಡು ಸಮೀಪಿಸಿತು. ಭೀಮನಾಯಕನು ಪ್ರಪಂಚದ ಮೇಲಿನ ಆಶೆಯನ್ನು ಬಿಟ್ಟುಕೊಟ್ಟನು. ಪ್ರಿಯತಮೆಯಾದ ರಂಗನಾಯಕಿಯ ಸುಂದರವಿಗ್ರಹವನ್ನು ಒಂದಾವರ್ತಿ ಮನೋನೇತ್ರದಿಂದ ನೋಡಿ ಸಂತೋಷಿಸಿದನು. ಆ ಬಾಲಮಿತ್ರನೂ, ತನ್ನ ಪ್ರಭುವೂ ಆದ ರಾಮನಾಯಕನನ್ನು ಒಂದಾವರ್ತಿ ನೆನೆದನು. ಕುಲದೇವತೆಯಾದ ಮಹಾಕಾಳಿಯನ್ನು ಒಂದಾವರ್ತಿ ಧ್ಯಾನಿಸಿದನು. "ಜೈ ಶಂಕರೀ" ಎಂದು ಸಿಂಹನಾದ ಮಾಡಿ, ಕುದುರೆಯನ್ನು ಮುಂದಕ್ಕೆ ಹಾರಿಸಿ, ಹಗೆಗಳ ಸೈನ್ಯಕ್ಕೆ ಅಡ್ಡನಿಂತನು.

ಪೆನುಗೊಂಡೆಯ ದಂಡು ಧಟ್ಟನೆ ನಿಂತು ಹೋಯಿತು. ಮುಂದಕ್ಕೆ ಹೆಜ್ಜೆ ಹಾಕಲು ಕಾಲುಗಳು ಬಾರದೇ ಹೋದವು. ಪ್ರಳಯ

ಕಾಲದ ರುದ್ರನಂತೆ ಎದುರಿನಲ್ಲಿ ಬಂದು ನಿಂತಿದ್ದ ಭೀಮನಾಯಕ ನನ್ನು ದಿಟ್ಟಿಸಿನೋಡಲು ಕೂಡ ಸಾಹಸವಿಲ್ಲದೇ ಹೋಯಿತು. ನರಸ ನಾಯಕನು ತತ್ತರಗೊಂಡನು. ಮುಂದಿನ ಕಾರ್ಯಾಲೋಚನೆಯು ಆತಗೆ ಹರಿಯಲಿಲ್ಲ. ಮೋಸಯುದ್ಧದಲ್ಲಿ ಅವನು ನಿಸ್ಸೀಮನಾಗಲಿ, ಎದುರು ನಿಂತು ವೀರಯುದ್ಧವನ್ನು ಮಾಡುವದು ಅವನರಿಯ. ತಾನೇ ಹಿಂಜಗ್ಗಿ ನಿಂತರೆ, ದಂಡು ಮುಂದಕ್ಕೆ ಹೋಗುವುದೇನು ? ತಾನು ಮುಂದುಬಿದ್ದರೆ ಒಂದೇ ಹೊಡತಕ್ಕೆ ಭೀಮನಾಯಕನು ಕಡೆಮಾಡು ವನೆಂಬ ಭೀತಿ. ಧನದಮೇಲಿನ ಹಂಬಲು, ರಾಜ್ಯದಮೇಲಿನ ಲೋಭ, ವನಿತೆಯರಮೇಲಿನ ಮೋಹ, ಪ್ರಾಣದಮೇಲಿನಆಶೆಯಿದ್ದವನಿಗೆ ಧೈರ್ಯವೆಲ್ಲಿಂದ ಬರಬೇಕು ? ಭೀಮನಾಯಕನಾದರೋ, ಇವೆ ಲ್ಲಕ್ಕೂ ತಿಲೋದಕವನ್ನು ಬಿಟ್ಟು, ಅಂಜದೇ, ಅಳುಕದೇ, ನಿಂತಿದ್ದನು. ನರಸನಾಯಕನು ಇವುಗಳ ಮೇಲಿನ ಭ್ರಾಂತಿಯಿಂದಿದ್ದವನಾದ ಕಾರಣ ಮುಂದಕ್ಕೆ ಹೆಜ್ಜೆ ಇಡಲು ಭಯಪಡುತ್ತಿದ್ದನು

ಬಹಳ ಹೊತ್ತಿನವರೆಗೂ ಉಭಯ ಪಕ್ಷದವರು ಸುಮ್ಮನಿ ದ್ದರು. ಆತುರಪಡಬೇಕಾದ ಅವಶ್ಯಕತೆಯು ಭೀಮನಾಯಕಗೆ ಇರ ಲಿಲ್ಲ. ಸಾಧ್ಯವಾದಷ್ಟು ಹೊತ್ತು ನರಸನಾಯಕನನ್ನು ಮುಂದಕ್ಕೆ ಬಿಡದೆ ನಿಲ್ಲಿಸಿ, ಕೈ ಕೈ ಕಲೆತಾಗ ಕೈಲಾದಷ್ಟು ಸೈನ್ಯವನ್ನು ಕೊಂದು ಸ್ವಾಮಿಯ ಕಾರ್ಯದಲ್ಲಿ ಕ್ಷತ್ರಿಯಧರ್ಮಾನು ಸಾರವಾಗಿ ಸತ್ತು, ಸತೀ ಮಣಿಯಾದ ರಂಗನಾಯಕಿಯ ಆತ್ಮಕ್ಕೆ ತೃಪ್ತಿಯನ್ನುಂಟು ಮಾಡಲು ದೃಢಚಿತ್ತನಾಗಿ ನಿಂತಿದ್ದನು.

ನರಸನಾಯಕನು ಸೈನಿಕರನ್ನು ಪ್ರೋತ್ಸಾಹಗೊಳಿಸುವನಾಗಲಿ, ತಾನು ಮಾತ್ರ ಮುಂದಕ್ಕೆಬಾರನು. ದೂರದಿಂದ ಭೀಮನಾಯ ಕನನ್ನು ಕೊಲ್ಲಬೇಕೆಂದರೆ ಬಿಲ್ಲುಬಾಣಗಳ ಯುದ್ಧವಲ್ಲ. ಮದ್ದು ಗುಂಡುಗಳ ಕಾಳಗವಲ್ಲ. ಖಾಡಾಖಾಡಿಯಾಗಿ ಖಡ್ಗ ಕಠಾರಿಗಳಿಂದ ಎದುರೆದುರಿಗೆ ನಿಂತು ಮಾಡುವ ಹೊಡೆದಾಟ. ಅದು ಭೀಮನಾ ಯಕನಿಗೆ ಕ್ಷೇಮಕರವಾಗಿತ್ತು. ತಾವಾಗಿ ಮುಂದಕ್ಕಾದರೂ ಬರಲಿ,

ಬಾರದೇ ನಿಂತಲ್ಲಿಯೇ ನಿಂತರೂ ನಿಲ್ಲಲಿ, ಬುದ್ಧಿ ತಂದುಕೊಂಡು ಹಿಂದಕ್ಕೆ ತಿರುಗಿದರೂ ತಿರುಗಲಿ, ಯಾವುದಾದರೂ ಆತಗೆ ಸಮ್ಮತ ವಿದ್ದಿತು. ನರಸನಾಯಕನು ತನ್ನ ಭಟರನ್ನು ಪ್ರೋತ್ಸಾಹಗೊಳಿಸಿದನೋ, ಬಹುಮಾನಗಳ ಆಸೆಯನ್ನು ತೋರಿಸಿದನೋ, ಭಯಪಡಿಸಿದನೋ, ಏನು ಮಾಡಿದನೋ; ಕೊನೆಗೆ ಅವರು ಮುಂದಕ್ಕೆ ಚಲಿಸಲು ಪ್ರಾರಂಭಿಸಿದರು. ಅರ್ಧಚಂದ್ರಾಕಾರವಾಗಿ ಭೀಮನಾಯಕನ ಸುತ್ತಲೂ ಕವಿದರು. ಆತನೊಬ್ಬನು ತಮಗೆ ತುತ್ತಾಗುವದು ನಿಜವೆಂದು ಎಲ್ಲರಿಗೂ ಗೊತ್ತೇ. ಅದರಲ್ಲಿ ಸಂಶಯವಿರಲಿಲ್ಲ. ಆದರೆ ಮುಂಚಿತವಾಗಿ ಕೆಲವರನ್ನು ಕೊಲ್ಲದೇ ಸಾಯನು. ಆತನ ಕೈಲಿ ಸಾಯಲು ಸಿದ್ಧರಾಗಿದ್ದವರು ತಮ್ಮಲ್ಲಿ ಯಾರೂ ಇರಲಿಲ್ಲ. ಅಶ್ವಾರೂಢನಾದ ಆತನೊಡನೆ, ಪಾದಚಾರಿಗಳಾದ ತಾವು ಕಡಿದಾಡಬೇಕೆಂದರೆ ಕಷ್ಟವಾಗಿತ್ತು. ಅಶ್ವಾರೂಢನಾಗಿದ್ದ ನರಸನಾಯಕನು ಮುಂದು ಬೀಳಬೇಕೆಂದರೆ ಅವನಿಗೆ ಪ್ರಾಣದಭಯ.

ನರಸನಾಯಕನು ಕೆಲವು ಸೈನ್ಯವನ್ನು ಭೀಮನಾಯಕನ ಮೇಲೆ ಬಿಟ್ಟು, ನಿಡುಗಲ್ಲಿನ ಕಡೆಹೋಗುವ ಉಪಾಯವನ್ನು ಹುಡುಕುತ್ತಿದ್ದನು. ಭೀಮನಾಯಕನು ಅದನ್ನು ಗ್ರಹಿಸಿದನು. "ಕೆಲವು ಸೈನ್ಯದೊಡನೆ ಅವನನ್ನು ಬಿಟ್ಟುಬಿಟ್ಟರೆ, ನಿಡುಗಲ್ಲಿನ ಜನರು ಅವರ ಹೊಡೆತಕ್ಕೆ ನಿಲ್ಲಲಾರರು. ಅದಲ್ಲದೇ ಹಗೆಗಳನ್ನು ಹಿಮ್ಮೆಟ್ಟಿಸಿರುವೆನೆಂದು ರಾಮನಾಯಕನಿಗೆ ವರ್ತಮಾನವನ್ನು ಕಳುಹಿಸಿರುವೆನು. ಆದಕಾರಣ ನಿಡುಗಲ್ಲು ಕೋಟೆಯಲ್ಲಿ ಎಲ್ಲರೂ ಯುದ್ಧದ ಭಯವನ್ನು ಬಿಟ್ಟು ವಿವಾಹದ ಸಂತೋಷದಲ್ಲಿ ಮೈಮರೆದಿರುವರು. ನರಸನಾಯಕನು ಹೋದರೆ ಅನಾಹುತಗಳಾಗುವುವು. ಇನ್ನು ನಾನು ಸುಮ್ಮನಿರಬಾರದು" ಎಂದು ಸೈನ್ಯದ ಮೇಲೆ ಬಿದ್ದನು. ಪ್ರಾಣದಿಂದ ಉಳಿದಿರಬೇಕೆಂಬುವವರಾಗಲಿ, ಧೈರ್ಯದಿಂದ ನಿಂತು ಹೊಡೆದಾಡಬೇಕೆಂಬುವರು ಯಾರೂ ಕಾಣಲಿಲ್ಲ. ಭೀಮನಾಯಕನು ಸೈನ್ಯವನ್ನೆಲ್ಲಾ ನುಗ್ಗಾಡುತ್ತಿದ್ದನು. ಕುದುರೆಯನ್ನು ದಿಕ್ಕಿನಿಂದ ದಿಕ್ಕಿಗೆ

ಹಾರಿಸುತ್ತಿದ್ದನು. ಆತನ ಕತ್ತಿಯ ಹೊಡೆತಕ್ಕೆ, ಕುದುರೆಯ ತುಳಿತಕ್ಕೆ ಲೆಕ್ಕವಿಲ್ಲದಷ್ಟು ಜನರು ಪ್ರಾಣಗಳನ್ನು ಬಿಡುತ್ತಿದ್ದರು. ಸೈನ್ಯವೆಲ್ಲವೂ ಚಕ್ರಾಕಾರವಾಗಿ ಆತನನ್ನು ಸುತ್ತುಗಟ್ಟಿತು. ಆತಗೆ ಮಾತ್ರ ಎಳ್ಳಷ್ಟಾದರೂ ಭೀತಿಯಿರಲಿಲ್ಲ. ತನ್ನ ಕೆಲಸವನ್ನು ತಾನು ಮಾಡುತ್ತಲಿದ್ದನು

ನರಸನಾಯಕನ ಮೇಲೆ ಆತನ ದೃಷ್ಟಿಯು ಹೋಗಲಿಲ್ಲ ಅವನು ನಿಡುಗಲ್ಲಿನ ಮಾರ್ಗವನ್ನು ಹಿಡಿಯಲಿಲ್ಲ. ಆ ದಾರಿಗೆ ಸೈನಿಕರಾರು ಹೋಗಲಿಲ್ಲ. ಅಷ್ಟು ಮಾತ್ರ ನೋಡಿಕೊಳ್ಳುತ್ತಾ, ತಾನು ಸಾಯುವದರೊಳಗೆ ಕೈಲಾದಷ್ಟು ಪೆನುಗೊಂಡೆಯ ಬಲವನ್ನು ಸವೆಯಿಸಬೇಕೆಂಬುವದೊಂದೇ ಆತನ ಕೂತೂಹಲ. ಅವರಾದರೋ ಭೀತಿಗೊಂಡಿದ್ದರು ಭೀಮನಾಯಕನು ಯಾವಕಡೆಯಿಂದ ಬರುವನೋ, ಕುದುರೆಯ ಕಾಲ್ತುಳಿತ, ಖಡ್ಗದ ಹೊಡೆತ ಯಾವಾಗ ಬೀಳುವವೋ ಎಂದು ಕಂಗೆಟ್ಟು ದಿಕ್ಕು ದಿಕ್ಕುಗಳನ್ನು ನೋಡುತ್ತಿದ್ದರು. ಭೀಮನಾಯಕನು ಎಲ್ಲಿ ನೋಡಿದರೂ ತಾನೇ ಆಗಿ, ನೂರಾರುಮಂದಿಯನ್ನು ಲಯಮಾಡುತ್ತಿದ್ದನು. ಆತನಿಗೆ ಭೀತಿಪಟ್ಟು, ಆತನ ಹೊಡತದಿಂದ ತಪ್ಪಿಸಿಕೊಂಡರೆ ಸಾಕೆಂಬುವರಾಗಲಿ ಆತನ ಮೇಲೆ ಕೈಮಾಡಬೇಕೆಂಬ ಯೋಧನು ಒಬ್ಬನೂ ಕಾಣಿಸಲಿಲ್ಲ. ಅವರೆಲ್ಲರೂ ನಿಸ್ಸಹಾಯರಾಗಿ ಆತನ ಮುಂದೆ ಬಿದ್ದುಹೋಗುತ್ತಿದ್ದರು. ನರಸನಾಯಕನಿಗೆ ಏನು ಮಾಡಲು ತೋಚದೆ ಹೋಯಿತು. ಭೀಮನಾಯಕನಿಗೆ ಎದುರುಬಿದ್ದು ಬದುಕುವದು ಸಟಿಯೆಂದು ಬಲ್ಲನು. ಧರ್ಮಯುದ್ಧದಲ್ಲಿ ಗೆಲ್ಲುವ ಧೈರ್ಯವು ಅವನಿಗೆ ಇಲ್ಲದೇ ಹೋಯಿತು. ಕುದುರೆಯಿಂದ ಕೆಳಗಿಳಿದು ಸೈನ್ಯದ ಮಧ್ಯದಲ್ಲಿ ಬೆಕ್ಕಿನಂತೆ ಹೊಂಚು ಹಾಕಿಕೊಂಡಿದ್ದನು ಭೀಮನಾಯಕನ ಅಶ್ವವು ಯಾವಾಗ ತನ್ನ ಕಡೆಗೆ ಬರುವುದೋ ಎಂದು ಕಳ್ಳನಾಯಿಯಂತೆ ಕಾದುಕೊಂಡಿದ್ದನು. ಸಮಯ ಸಿಕ್ಕಿತು. ಕುದುರೆಯನ್ನು ಮುಂದಕ್ಕೆ ಬಿಟ್ಟು ಹಿಂದಿನ ಕಾಲುಗಳನ್ನು ಖಡ್ಗದಿಂದ ಕಡಿದನು. ಸೈನ್ಯ ಮಧ್ಯದಲ್ಲಿ ಅಡಗಿ ಹೋದನು.

ಆ ಅಶ್ವರಾಜವು ಮೇಲಕ್ಕೆಹಾರಿ ನೆಲಕ್ಕೆ ಬಿದ್ದಿತು. ಭೀಮನಾಯಕನು ಕೆಳಗೆ ಧುಮಿಕಿ ತನ್ನ ಖಡ್ಗ ಚಾತುರಿಯಿಂದ ಮುಸುಗಿದ್ದ ಸೈನಿಕರನ್ನು ಧ್ವಂಸಗೊಳಿಸಿ, ಒಮ್ಮೆ ಕುದುರೆಯ ಕಡೆ ನೋಡಿದನು. ಆ ಮೂಕಜೀವಿಯು ತನ್ನ ಪ್ರೇಮವನ್ನು ವ್ಯಕ್ತಗೊಳಿಸುತ್ತ, ಆತನಕಡೆ ತನ್ನ ದೀನ ದೃಷ್ಟಿಯನ್ನು ಪಸರಿಸಿತು. ಮೃದು ಹೃದಯನಾದ ಆ ವೀರನು ಅದನ್ನು ಸಮೀಪಿಸಿ, ಅದರ ದುಸ್ಥಿತಿಗೆ ಸಂಕಟಪಟ್ಟು ಕಣ್ಣೀರಿಟ್ಟನು. ಖಡ್ಗವನ್ನು ಕೆಳಗಿಟ್ಟು ಮೈ ಸವರುತ್ತಲಿದ್ದನು! ಆ ವೀರಾಶ್ವದ ದೃಷ್ಟಿಯು ಆ ವೀರ ಕ್ಷತ್ರಿಯನ ದೃಷ್ಟಿಯು ಏಕವಾದವು. ತುರುಗರಾಜದ ಕಣ್ಣಿನಿಂದ ಒಂದೆರಡು ಅಶ್ರುಬಿಂದುಗಳು ಜಾರಿದವು. ಅದು ಕಣ್ಣುಮುಚ್ಚಿತು. ಪ್ರಾಣವನ್ನು ಬಿಟ್ಟಿತು. ಭೀಮನಾಯಕನ ಕಣ್ಣಿನಿಂದ ಅಶ್ರುಧಾರೆಯು ಸುರಿಯಿತು. ದುಃಖದಲ್ಲಿ ಮೈಮರೆದಿದ್ದನು. ಇಷ್ಟೆಲ್ಲವೂ ಅರಘಳಿಗೆಯಲ್ಲಿಯೇ ಜರುಗಿತು.

ಆದರೇನು! ಕುತಂತ್ರದಲ್ಲಿ ಪ್ರವೀಣನಾಗಿದ್ದ ನರಸನಾಯಕನಿಗೆ ಆ ಅರಘಳಿಗೆಯೇ ಸಾಕಾಗಿತ್ತು. ದುಃಖಾವೇಶನಾಗಿ ಮೈಮರೆದಿದ್ದ ಭೀಮನಾಯಕನ ಮೇಲೆ ಚಂಗನೆ ಹಾರಿ, ಹಿಂಭಾಗದಿಂದ ಆತನ ಬಲಭುಜವನ್ನು ಕಡಿದನು. ಭೀಮನಾಯಕನು ಹೆಬ್ಬುಲಿಯಂತೆ ಗರ್ಜಿಸುತ್ತಾ, ನೆಲದಮೇಲಿದ್ದ ಕತ್ತಿಯನ್ನು ಎಡಗೈಲಿ ತೆಗೆದುಕೊಂಡು, ಹಿಂದಕ್ಕೆ ತಿರುಗಿ ನೋಡಿದನು. ಆದರೆ ನರಸನಾಯಕನು ಕಾಣಬರಲಿಲ್ಲ. ಅವಯವ ಹೀನನಾಗಿದ್ದರೂ ಆತನ ಎದುರಿಗೆ ನಿಲ್ಲಲು ಧೈರ್ಯವಿಲ್ಲದೇ ಹೋಯಿತು. ಮಾಯವಾಗಿ ಹೋಗಿದ್ದನು. ಏನೊಂದು ಪಾಪವನ್ನರಿಯದ ಸೈನಿಕರನ್ನು ಭೀಮನಾಯಕನ ಕ್ರೋಧಾಗ್ನಿಗೆ ಆಹುತಿಕೊಟ್ಟು, ಸೈನ್ಯದ ಮಧ್ಯದಲ್ಲಿ ಹೊಂಚು ಹಾಕಿಕೊಂಡಿದ್ದನು. ಭೀಮನಾಯಕನಿಗೆ ತನ್ನ ಘಾಯದ ನೋವು ಕಾಣಿಸಲಿಲ್ಲ! ಸುರಿಯುವ ರಕ್ತದಮೇಲೆ ಲಕ್ಷ್ಯವಿರಲಿಲ್ಲ! ಆತನ ದೃಷ್ಟಿಯು ನಿಡುಗಲ್ಲಿನ ಮಾರ್ಗದ ಮೇಲೆಯಿತ್ತು. ಪ್ರಾಣವಿರುವವನಕ ಆ ದಾರಿಗೆ ಹಗೆಯರನ್ನು ಬಿಡಬಾರದೆಂದು ದೃಢಮನಸ್ಸಿ

ನಿಂದ ಹೋರಾಡುತ್ತಿದ್ದನು. ತಾನೆಷ್ಟುಮಂದಿ ಸೈನಿಕರನ್ನು ಕೊಂದರೆ, ಅಷ್ಟು ಸ್ವಾಮಿ ಸೇವೆಯನ್ನು ಹೆಚ್ಚಾಗಿ ಮಾಡಿದಂತೆ ಎಂದು ಭಾವಿಸಿದನು. ಅಷ್ಟು ರಾಮನಾಯಕನ ಕಾರ್ಯವು ಸುಲಭಮಾಡಿದಂತೆಯೆಂದು ತಿಳಿದಿದ್ದನು. ಚಂಗಚಂಗನೆ ಹಾರುತ್ತಾ ಭಟರ ಕಾಯಗಳನ್ನು ಕದಳಿಯ ಕಾಂಡಗಳಂತೆ ನಿರಾಯಾಸವಾಗಿ ಕಡಿಕಡಿದು ಕೆಡಹುತ್ತಲಿದ್ದನು. ಆತನ ಹೊಡತ ಒಂದು ಕಡೆ. ತಮ್ಮ ನಾಯಕನು ಕಣ್ಣಿಗೆ ಬೀಳದೆ ಇರುವ ನಿರುತ್ಸಾಹ ಒಂದುಕಡೆ. ಅವರು ಕಂಗೆಟ್ಟು ಕಕ್ಕಾಬಿಕ್ಕಿಯಾಗುತ್ತಿದ್ದರು. ತಾನಿನ್ನು ಸುಮ್ಮನಿರಬಾರದೆಂದು ನರಸನಾಯಕನು ಹೊಂಚು ಹಾಕಿಕೊಂಡಿದ್ದು ಹಿಂಭಾಗದಿಂದಲಾಕಲಿಯುಗದ ಅಭಿಮನ್ಯುವಿನ ಎಡಗೈಯನ್ನು ಸಹಾ ಕಡಿದುಹಾಕಿದನು. ಎರಡೂ ತೋಳುಗಳನ್ನು ಕಳೆದುಕೊಂಡು ಮಾಡುವದೇನೆಂದು ಭೀಮನಾಯಕನು ಸುಮ್ಮನಾಗಲಿಲ್ಲ. ಹಿಂದಕ್ಕೆ ತಿರುಗಿ ನರಸನಾಯಕನನ್ನು ಮುಖಾಮುಖಿ ನೋಡಿದನು. ಜಿಗಿದು ಕಾಲಿಲಿ ಒದೆದನು. ಅವನು ಹಿಂದಕ್ಕೆ ಬಿದ್ದನು. ನಮ್ಮ ಶೂರನು ಅವನ ಎದೆಯ ಮೇಲೆ ನಿಂತನು. ನೆಲಕ್ಕೆಬಿದ್ದ ನರಸನಾಯಕನು ಥರಥರನೆ ನಡುಗಿದನು. ತನ್ನ ಅವಸಾನವು ಸಮೀಪಿಸಿತೆಂದು ಭೀತಿಪಟ್ಟನು. ಕೊಂಚ ಧೈರ್ಯ ತಂದುಕೊಂಡು, ಎರಡು ಬಾಹುಗಳನ್ನು ಕಳೆದುಕೊಂಡು ಅಸಹಾಯನಾಗಿದ್ದ ಆತನನ್ನು ತನ್ನ ಕತ್ತಿಯಿಂದ ಹೊಡೆಯಲುಪಕ್ರಮಿಸಿದನು. ತೊಡೆಗಳನ್ನು ಕಚಕಚನೆ ಕಡಿಯುತ್ತಿದ್ದನು. ಭೀಮನಾಯಕನಿಗೆ ಆ ಹೊಡತದ ಶೂಲೆಯು ಕಾಣಿಸಲೇ ಇಲ್ಲ. ಶತೃವು ತನ್ನ ಕಾಲ್ಕೆಳಗೆ ಬಿದ್ದಿರುವನೆಂತಲೂ, ಅವನನ್ನು ಮೇಲಕ್ಕೆ ಏಳಲೀಸಬಾರದೆಂತಲೂ, ಧೃಢಮನಸ್ಕನಾಗಿ ನಿಂತಿದ್ದನು.

ಅಷ್ಟರಲ್ಲಿಯೇ ಪೆನುಗೊಂಡೆಯ ಸೈನಿಕರು ಮೇಲೆಬಿದ್ದು ಆತನ ಶಿರವನ್ನು ಹಾರಿಸಿಬಿಟ್ಟರು! ಶಿರಹೀನವಾದ ಆ ಮುಂಡದಿಂದ ರಕ್ತವು ಚಲ್ಲನೆ ಸುರಿದು ಕೆಳಗೆ ಬಿದ್ದಿದ್ದ ನರಸನಾಯಕನಮೇಲೆ

ಹರಿದು ಹೋಗುತ್ತಿತ್ತು. ಅವನು ಕೆಳಗೆ ಬಾಯಿಬಾಯಿ ಬಿಡುತ್ತಿದ್ದನು. ಬುಸುಗುಟ್ಟುತ್ತಿದ್ದನು. ದೊಡ್ಡದೊಂದು ಗುಂಡಿಗಿಂತ ಹೆಚ್ಚಾದ ಭಾರದಿಂದ ಆ ಮುಂಡವು ನಿಂತಿರಲು ಬದುಕುವೆನೆಂಬ ಆಶೆಯಿಲ್ಲದೆ ಕಣ್ಣುಕಣ್ಣು ಬಿಡುತ್ತಿದ್ದನು. ಅತನ ಗತಿಯನ್ನು ನೋಡಿ ಕನಿಕರಿಸಿ ಒಬ್ಬಿಬ್ಬರು ಆ ಮುಂಡವನ್ನು ಕಡೆಗೆ ದಬ್ಬಲು ಪ್ರಯತ್ನಿಸಿದರಾಗಲಿ, ಸಾಧ್ಯವಾಗಲಿಲ್ಲ. ಮನೋಬಲದ ಪ್ರಭಾವವೋ ಏನೋ! ಆ ಮುಂಡವು ನರಸನಾಯಕನ ಎದೆಯಲ್ಲಿ ಬೇರೂರಿಕೊಂಡಂತೆ ಅಚಲವಾಗಿತ್ತು. ಸೈನಿಕರು ಸೋಜಿಗಗೊಂಡರು. ನಾಲ್ಕಾರು ಮಂದಿ ಆ ಮುಂಡವನ್ನು ಕಡೆಗೆ ತಳ್ಳಿದರು. ರಕ್ತಸಿಕ್ತಗಾತ್ರನಾದ ನರಸನಾಯಕನು ಮೇಲಕ್ಕೆದ್ದು, ದೊಡ್ಡ ಗಂಡಾಂತರದಿಂದ ಪಾರಾಗಿ ಪ್ರಾಣದಿಂದ ಉಳಿದೆನೆಂದು ಸಮಾಧಾನಪಟ್ಟನು.

ಭೀಮನಾಯಕನ ಅದ್ವಿತೀಯವಾದ ಜೀವಿತ ನಾಟಕವು ಮುಗಿಯಿತು. ಆತನು ಕಾಲವೆಂಬ ತೆರೆಯ ಹಿಂದೆ ಮರೆಯಾಗಿ ಹೋದನು.



## ೧೧ನೆಯ ಪ್ರಕರಣ.

ಬಿದಿಗೆಯದಿನ ಸೂರ್ಯೋದಯಕ್ಕೆ ಮುಂಚೆಯೇ ನಿಡಗಲ್ಲು ಪ್ರಜೆಗಳು ನಿದ್ರೆಯಿಂದೆದ್ದು ರಾಜಕುವರಿಯಾದ ಲಾವಣ್ಯವತಿಯ ವಿವಾಹಸಂಭ್ರಮದಿಂದ ಇದ್ದರು. ರಾಮನಾಯಕನು ಹಿಂದಿನದಿನ ಸಾಯಂಕಾಲವೇ ಬಂದು ದೇವಿಯ ಆಲಯದಲ್ಲಿ ಬಿಡದಿ ಮಾಡಿದ್ದದ್ದು ವಾಚಕರಿಗೆ ಗೊತ್ತುಂಟು. ತನ್ನ ಆಪ್ತನೂ, ಬಂಧುವೂ, ಸಚಿವನೂ, ಆದ ಭೀಮನಾಯಕನು ಕುತ್ಸಿತಮತಿಯಾದ ನರಸನಾಯಕನನ್ನು ಮುಂದಕ್ಕೆ ಬಿಡುವುದಿಲ್ಲವೆಂಬ ನಂಬುಗೆಯು ಆತನಿಗಿತ್ತು. ಈ ವರ್ತಮಾನವನ್ನು ಕೇಳಿ ಬಸಪ್ಪನಾಯಕನು ಧೈರ್ಯ ತಂದುಕೊಂಡಿದ್ದನು. ಪ್ರಜಾಜನರೆಲ್ಲರೂ ನಿರ್ಭೀತರಾಗಿದ್ದರು. ಲಾವಣ್ಯವತಿಯ ಅನುಮಾನಗಳೆಲ್ಲವೂ ಮಾಯವಾಗಿ ಹೋಗಿದ್ದವು. ಸರ್ವರೂ ಆನಂದದಿಂದ ಆ ಶುಭಕಾರ್ಯದ ಸನ್ನಾಹದಲ್ಲಿದ್ದರು. ಪಟ್ಟಣವೆಲ್ಲವನ್ನೂ ಅಲಂಕಾರಮಾಡಿದ್ದರು. ದ್ವಾರ ದ್ವಾರಗಳಿಗೂ ತೋರಣಗಳನ್ನು ಕಟ್ಟಿದ್ದರು. ಕಲ್ಯಾಣಮಂಟಪವಂತೂ ಕಣ್ಣಿಗೆ ರಂಜಕವಾಗಿತ್ತು. ರಾಜದೇವಿಯಿಂದ ರಾಮನಾಯಕನನ್ನು ಇದಿರುಗೊಂಡು ಮಂಟಪಕ್ಕೆ ಕರೆದುಕೊಂಡು ಬಂದರು. ಸರ್ವಾಲಂಕಾರಭೂಷಿತಳಾದ ಲಾವಣ್ಯವತಿಯನ್ನು ಕರೆತಂದರು. ತನ್ನ ಮನೋನಾಯಕನನ್ನು ಯಾವಾಗ ನೋಡುವೆನೆಂಬ ಆತುರವು ಆಕೆಗೆ ಹೆಚ್ಚಾಗಿತ್ತು. ತನ್ನ ಭಾಗ್ಯಲಕ್ಷ್ಮಿಯ ಮುಖಚಂದ್ರನನ್ನು ನೋಡಲು ರಾಮನಾಯಕನ ಮನಸ್ಸು ತೀವ್ರಪಡುತ್ತಿತ್ತು. ತಮಗೆ ಅಂತರಾಯವಾಗಿದ್ದ ತೆರೆಯು ತೆಗೆಯಲ್ಪಟ್ಟಿತು. ವಧೂ ವರರ ದೃಷ್ಟಿಗಳು ಕಲೆತವು. ಮನಸ್ಸಾರ ಅವರು ಒಬ್ಬರನ್ನೊಬ್ಬರು ನೋಡಿದರು. ಆನಂದವಾರಿಧಿಯಲ್ಲಿ ತೇಲಿಹೋಗುತ್ತಿದ್ದರು. ವಿಪ್ರಾಶೀರ್ವಾದಗಳ ನಡುವೆ ಬಸಪ್ಪನಾಯಕನು ನಿಡುಗಲ್ಲು ವೀರರ ಅನುಮತಿಯನ್ನು ಪಡೆದು ರಾಜಕುವರಿಯನ್ನು ರಾಮನಾಯಕನಿಗೆ ಧಾರೆಯೆರೆದು ಕೃತಾರ್ಥನಾದನು. ತನ್ನ ಕಾರ್ಯಸಾಧನೆಯಾಯಿತೆಂತಲೂ, ಅಸಮಾನ

ಸೌಂದರ್ಯವತಿಯೂ, ಗುಣವತಿಯೂ, ಆದ ಅರಸುಮಗಳು ತನಗೆ ಲಭಿಸಿದಳೆಂತಲೂ, ರಾಮನಾಯಕನು ಹಿಗ್ಗಿದನು. ಲಾವಣ್ಯಾವತಿಯ ಸಂತೋಷಕ್ಕೆ ಮೇರೆಯೇ ಇಲ್ಲ. ನರಸನಾಯಕನು ಜ್ಞಾಪಕಕ್ಕೆ ಬಂದರೆ ಈಗಲೂ ಆಕೆಯ ಶರೀರವು ಕಂಪಿಸುತ್ತಿತ್ತು. ಅಂಥವನ ಬಾರಿಯಿಂದ ತಪ್ಪಿಸಿಕೊಂಡಳು. ಹಾಳಾಗಿಹೋಗಿದ್ದ ನಿಡುಗಲ್ಲು ರಾಜ್ಯವು ಜೀರ್ಣೋದ್ಧಾರವಾಯಿತು. ಬಾಲ್ಯದಾರಭ್ಯ ತಾನು ಮೋಹಿಸಿದ್ದ ರಾಮನಾಯಕನು ತನಗೆ ಲಭಿಸಿದನು. ಆಕೆಗೆ ಏನೊಂದು ಕೊರತೆಯೂ ಕಾಣಬರಲಿಲ್ಲ. ಈ ದಿನ ಆಕೆಗೆ ಭೂಲೋಕವೇ ಸ್ವರ್ಗವಾಗಿ ಕಾಣಿಸಿತು. ಈ ಸಮಯಕ್ಕೆ ಭೀಮನಾಯಕನು ಕಳುಹಿಸಿಕೊಟ್ಟಿದ್ದ ಚಾರರು ಬಂದು ಮಂತ್ರೀಶ್ವರನು ನರಸನಾಯಕನನ್ನು ಹಿಮ್ಮೆಟ್ಟಿಸಿ ಜಯಪತಾಕೆಯನ್ನೆತ್ತಿದನೆಂತಲೂ, ನಿಡುಗಲ್ಲಿಗೆ ಹತಶೇಷರಾದ ಸೈನಿಕರೊಡನೆ ಬರುತ್ತಲಿದ್ದಾನೆಯೆಂತಲೂ ತಿಳುಹಿಸಿದರು. ಈ ಸುವಾರ್ತೆಯನ್ನು ಕೇಳಿ, ಸರ್ವರೂ ಸಂತೋಷಪಟ್ಟರು.

ವಿವಾಹವು ಮುಗಿಯಿತು. ತನ್ನಮೇಲಿನ ಮುಖ್ಯವಾದ ಭಾರವು ತೀರಿತು. ಇನ್ನೊಂದುಮಾತ್ರ ನಿಂತಿತ್ತು. ಅದನ್ನು ತೀರಿಸಿಕೊಂಡು ಬಸಪ್ಪನಾಯಕನು ತನ್ನ ಪಟ್ಟಣಕ್ಕೆ ತಾನು ಹೋಗಬೇಕೆಂದು ಆತುರಪಡುತ್ತಿದ್ದನು. ನಿಡುಗಲ್ಲಿನ ಸಿಂಹಾಸನಕ್ಕೆ ಮುಂದೆ ಅಧಿಕಾರಿಗಳು ದಾರೆಂಬುವುದೊಂದೇ ವಿಮರ್ಶೆಯಾಗಿರಲಿಲ್ಲ. ಅದರ ವಿಮರ್ಶೆಗಾಗಿ ಭೋಜನಾನಂತರ ಆಸ್ಥಾನ ಮಂಟಪದಲ್ಲಿ ಸಭೆಯನ್ನು ಕೂಡಿಸಿದನು. ಕೋಟೆಯ ಪ್ರಮುಖರೆಲ್ಲರೂ ನೆರೆದಿದ್ದರು. ಬಸಪ್ಪನಾಯಕನು ಆಸೀನನಾಗಿದ್ದನು. ರಾಮನಾಯಕನು ಲಾವಣ್ಯಾವತಿಯು ಬಂದಿರಲಿಲ್ಲ. ಅವರಿಬ್ಬರಿಗಾಗಿ ಸರ್ವರೂ ಎದುರು ನೋಡುತ್ತಿದ್ದರು. ಆ ಕಾಲದಲ್ಲಿಯೇ ಅವರೀರ್ವರೂ ಸೂರ್ಯ, ಚಂದ್ರರಂತೆ ಕಂಗೊಳಿಸುತ್ತ ಸಭಾಮಂಟಪವನ್ನು ಹೊಕ್ಕರು. ಸರ್ವರೂ ಎದ್ದುನಿಂತು, ಅವರನ್ನಾಹ್ವಾನಮಾಡಿದರು. ತಮಗೆ ಏರ್ಪಡಿಸಿದ್ದ ಆಸನಗಳಲ್ಲಿ ದಂಪತಿಗಳೀರ್ವರೂ ಆಸೀನರಾದರು.

ಸಿಂಹಾಸನವು ಮಾತ್ರ ಶೂನ್ಯವಾಗಿತ್ತು. ಅದನ್ನು ಒಮ್ಮೆ ಲಾವಣ್ಯವತಿಯು ಕಣ್ಣೆತ್ತಿ ನೋಡಿದಳು. ತಂದೆಯು ನೆನಪಿಗೆ ಬಂದನು. ಕಣ್ಣೀರಿಟ್ಟಳು. ರಾಮನಾಯಕನ ಮನಸ್ಸು ಕರಗಿತು. ತಾನೇನೂ ಮಾಡಲಾರದೆ ಹೋದನು. ಆ ಸಮಯದಲ್ಲಿ ಆಕೆಯನ್ನು ಸಮಾಧಾನ ಪಡಿಸುವ ಯತ್ನವು ನಿಷ್ಫಲವೆಂದು ಆತನು ಬಲ್ಲವನಾಗಿ ಸುಮ್ಮನಿದ್ದನು.

ಬಸಪ್ಪನಾಯಕನು ಎದ್ದು ನಿಂತು ಮುಕುಳಿತ ಹಸ್ತನಾಗಿ ಸಭಿಕರನ್ನುದ್ದೇಶಿಸಿ ಈ ರೀತಿ ನುಡಿದನು. "ಮಹನೀಯರೇ ! ಸ್ವಾಮಿಭಕ್ತಿ ಪರಾಯಣರಾದ ನಿಮ್ಮನ್ನು ಹೊಗಳಬೇಕೆಂದರೆ ಒಂದುನಾಲಿಗೆಯ ಮಾತುಗಳು ಸಾಲವು. ನನ್ನ ಮಾತನ್ನು ಮನ್ನಿಸಿ ನೀವೆಲ್ಲರೂ ಹಾಳುಬಿದ್ದಿದ್ದ ಈ ಕೋಟೆಗೆ ಬಂದು, ರಾಜಕುಮಾರಿಯಾಗಿದ್ದ ಲಾವಣ್ಯವತಿಗೋಸುಗ ಯುದ್ಧಮಾಡಿ ಸಾಯಲು ಸಹಾ ಕಂಕಣಬದ್ಧರಾಗಿನಿಂತಿರಿ. ನಿನ್ನಿನದಿನದ ಸಾಯಂಕಾಲದವರೆಗೂ ನಾವೆಲ್ಲರೂ ಪ್ರಾಣಗಳನ್ನು ಅಂಗೈಗಳಲ್ಲಿ ಇಟ್ಟುಕೊಂಡಿದ್ದೆವು. ನರಸನಾಯಕನು ತನ್ನ ಕತ್ತಿಗೆ ಅಡ್ಡವಿಲ್ಲದೆ, ಮೇಲೆ ಬೀಳುವನೇನೋ ಎಂಬ ಭೀತಿಯು ಸರ್ವರಿಗೂ ಸಂಪೂರ್ಣವಾಗಿದ್ದಿತು. ದಯಾಸಾಗರನಾದ ರಾಮನಾಯಕನು ತನ್ನ ಕೃಪಾಕಟಾಕ್ಷದಿಂದ ನಮ್ಮನ್ನು ಜೀವದಿಂದ ಉಳಿಸಿದನು. ಹಾಳಾಗಿ ಹೋಗಿದ್ದ ಈ ರಾಜ್ಯವನ್ನು ಪುನಹ ಉದ್ಧರಿಸಿದನು. ರಾಜಕುಮಾರಿಯ ಮಾನಪ್ರಾಣಗಳನ್ನು ರಕ್ಷಣೆ ಮಾಡಿದನು. ನನ್ನ ಬಿನ್ನಹವನ್ನು ಕೇಳಿ ಬಡವಳೆಂದು ಜರಿಯದೆ, ರಾಜ್ಯಹೀನಳೆಂದು ಹಿಯ್ಯಾಳಿಸದೆ, ಪರದೇಶಿಯೆಂದು ಅಲಕ್ಷ್ಯಮಾಡದೆ ತನ್ನ ಘನತೆಯನ್ನು ಲೋಕವಿದಿತವಾಗಿ ಪ್ರಕಟನೆ ಮಾಡಿದನು. ನಮ್ಮೆಲ್ಲರನ್ನೂ ಉದ್ಧರಿಸಿದನು. ನನ್ನ ಕಾರ್ಯವು ಪೂರೈಸಿತು.

"ಇನ್ನು ಮೇಲೆ ನಿಮಗೆ ರಾಜನು ಬೇಕಾಗಿದೆ. ರಾಜನಿಲ್ಲದ ರಾಜ್ಯವು ಅರಾಜಕವಾಗುವದು. ಸಂಗನಾಯಕನಂತಹ ಪ್ರಭುವು ನಿಮಗೆ ಈ ಜನ್ಮದಮಧ್ಯ ದೊರೆಯುವುದು ದುರ್ಲಭ. ಆದರೂ

ಇರುವವರಲ್ಲಿ ಉತ್ತಮನೂ, ವೀರನೂ, ಪ್ರಜಾಪಕ್ಷಪಾತಿಯೂ ಆದವನೊಬ್ಬನನ್ನು ರಾಜನನ್ನಾಗಿ ಏರ್ಪಡಿಸಿಕೊಳ್ಳಬೇಕು. ಪಟ್ಟಾಭಿಷೇಕಕ್ಕೆ ಇದು ಸುಮೂಹರ್ತವಾಗಿದೆ. ಆದಕಾರಣ ನಿಮ್ಮ ಮನಸ್ಸಿಗೆ ಬಂದವನೊಬ್ಬನನ್ನು ನೇಮಕಮಾಡಿರಿ. ಆತನಿಗೆ ಪಟ್ಟಾಭಿಷೇಕ ಮಾಡೋಣ. ಪ್ರಜೆಗಳ ಮನಸ್ಸಿಗೆ ಬಂದ ಪ್ರಭುವು ನಾಲ್ಕುದಿನ ರಾಜ್ಯವಾಳಬಲ್ಲವನಾಗಲಿ, ಅವರಿಗೆ ಒಲ್ಲದವನು ಅ ಚಿರಕಾಲದಲ್ಲಿಯೇ ಪದಭ್ರಷ್ಟನಾಗುವನು. ಅಂಥಾ ಅನಾಹುತುಗಳಿಗೆ ಅವಕಾಶಕೊಡದೆ ನಿಮಗೆ ಬೇಕಾದವನೋರ್ವನನ್ನು ರಾಜನನ್ನಾಗಿ ಚುನಾಯಿಸುವ ಭಾರವು ನಿಮ್ಮ ಮೇಲೆ ಇದೆ.” ಎಂದು ಹೇಳಿ, ಆಸೀನನಾದನು.

ಸಭೆಯುವರೆಲ್ಲರೂ ಸುಮ್ಮನೇ ಇದ್ದರು. ಯಾರೊಬ್ಬರೂ ಮಾತನಾಡದೆ ಹೋದರು. ಲಾವಣ್ಯವತಿಯು ಎದ್ದುನಿಂತು ತನ್ನ ಮೃದುಮಧುರವಾಣಿಯಿಂದ ಈ ರೀತಿ ಹೇಳಿದಳು. “ದೊಡ್ಡಪ್ಪನವರೇ ! ನೀವು ಹೇಳಿದ ಮಾತುಗಳು ನನಗೆ ಅರ್ಥವಾಗಿಯೂ ಆಗದೇ ಇವೆ. ನಿಡುಗಲ್ಲು ಮೊದಲಿನಿಂದಲೂ ನಿಮ್ಮದೇ. ಉದಾರ ಹೃದಯರಾದ ನೀವು ನನಗೆ ಜನಕನೂ ನಿಮಗೆ ಅನುಜನೂ ಆದ ಸಂಗನಾಯಕಗೆ ನೀವಾಗಿನೀವು ಬಿಟ್ಟುಕೊಟ್ಟಿದ್ದಿರಿ. ಆತನಾದರೋ ಅಕಾಲಮರಣವನ್ನು ಹೊಂದಿದನು. ಆತನ ಹೊಟ್ಟೆಯಲ್ಲಿ ಹುಟ್ಟಿದ್ದು ನಾನೊಬ್ಬಳೇ. ದಿಕ್ಕಿಲ್ಲದೇ ಪ್ರಾಣತ್ಯಾಗ ಮಾಡಲು ಸಿದ್ಧಳಾಗಿದ್ದ ನನ್ನನ್ನು ಉದ್ಧಾರಮಾಡಿದಿರಿ. ವೀರಾಗ್ರೇಸರನೂ, ದಯಾಸಾಗರನೂ ಆದ ರಾಮನಾಯಕನಿಗೆ ಅರ್ಧಾಂಗಿಯನ್ನಾಗಿ ಮಾಡಿದಿರಿ. ನನ್ನ ಪತಿಯೊಡನೆ ನಾಳಿನ ದಿನ ನಾನು ರತ್ನಗಿರಿಗೆ ಪ್ರಯಾಣ ಮಾಡುತ್ತೇನೆ. ಈ ರಾಜ್ಯವು ನಿಮ್ಮದು. ನೀವೇ ದೊರೆಗಳಾಗಬೇಕು. ನಿಮ್ಮಂತಹ ಭೂತದಯಾತತ್ಪರರೂ, ಧರ್ಮಾಚರಣರೂ, ಪ್ರಜಾಪಕ್ಷಪಾತಿಗಳೂ ಆದ ರಾಜರು ಪ್ರಜೆಗಳಿಗೆ ಮತ್ತಾರುಸಿಗುವರು? ನಿಮ್ಮನ್ನು ಬಿಟ್ಟು ಅವರ ಆಶೆಯು ಮತ್ತಾರಲ್ಲಿಯೂ ಇರಲಾರದು. ನೀವೇ ಪ್ರಭುಗಳಾಗಬೇಕು. ರಾಜನಿಲ್ಲದ ಕೊರತೆಯನ್ನು ತೀರಿಸಬೇಕು. ನನಗೆ

ಯಾವದೊಂದು ಕೋರಿಕೆಯೂ ಇಲ್ಲ. ಕಲ್ಪತರುವಿನಂತಹ ಕಾಂತನು ನನಗೆ ಲಭಿಸಿರುವನು. ನಾನು ಬಯಸಿರುವದೊಂದೇ. ತಂದೆಯಿಲ್ಲದ ಕೊರತೆಯನ್ನು ಹೋಗಲಾಡಿಸಿ ನೀವು ನನಗೆ ತೌರು ನಡಿಸಿದರೆ ಸಾಕು. ಹೊಕ್ಕಮನೆಯಂತೆಯೇ ಹುಟ್ಟಿದ ಮನೆಯು ಸಹಾ ವೃದ್ಧಿಗೆ ಬರಬೇಕೆಂಬುವುದೊಂದೇ ನನ್ನ ಹರಿಕೆ. ಹೆಣ್ಣುಮಕ್ಕಳಿಗೆ ತೌರಿನಂತಹ ಸೌಭಾಗ್ಯವು ಬೇರೆಯಿಲ್ಲ. ಅದು ಬಿಟ್ಟು ನಾನು ಬೇರೆ ಕೋರುವವಳಲ್ಲ. ಆದಕಾರಣ ತಾವು ಸಿಂಹಾಸನವನ್ನೇರಿ ನನಗೆ ಪ್ರಯಾಣಕ್ಕೆ ಅಪ್ಪಣೆಕೊಡಿರಿ. " ಎಂದು ಹೇಳಿ ಸುಮ್ಮನಾದಳು. ಸಭಿಕರೆಲ್ಲರು " ಜಯಾ ಬಸಪ್ಪನಾಯಕನವರಿಗೆ ಜಯಾ " ಎಂದು ಜಯಜಯಧ್ವನಿಯನ್ನು ಮಾಡಿದರು. ಆ ವನಿತಾಮಣಿಯ ಮಾತಿಗೆ ಸಮ್ಮತಿಯನ್ನು ಪ್ರಕಟಿಸಿವರು. ಬಸಪ್ಪನಾಯಕನು ತಮಗೆ ಅರಸನಾಗುವನೆಂದು ನಂಬಿದರು.

ಬಸಪ್ಪನಾಯಕನು ಮತ್ತೊಮ್ಮೆ ಎದ್ದುನಿಂತು ಈ ರೀತಿ ನುಡಿದನು. " ಸಭಿಕರೇ ! ಮಗಳ ಮಾತುಗಳನ್ನು ಆಲಿಸಿ, ನನ್ನನ್ನು ಸಿಂಹಾಸನಕ್ಕೆ ಚುನಾಯಿಸಿ, ನನ್ನಲ್ಲಿ ನಿಮಗಿದ್ದ ಪ್ರೇಮವನ್ನು, ವಾತ್ಸಲ್ಯವನ್ನು, ನಿಮ್ಮ ಔದಾರ್ಯವನ್ನು ವ್ಯಕ್ತಗೊಳಿಸಿದಿರಿ. ನಿಮಗೆ ನಾನು ಆ ಜನ್ಮ ಋಣಿಯಾಗಿದ್ದೇನೆ. ಆದರೂ, ತಮ್ಮ ಆಜ್ಞೆಗೆ ಬದ್ಧನಾಗಲು ಅಶಕ್ತನಾಗಿದ್ದೇನೆ. ಇದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ನಿಮ್ಮೆಲ್ಲರಿಗೂ ಒಂದನೆಗಳನ್ನು ಮಾಡಿ, ಬೇಡಿಕೊಳ್ಳುತ್ತೇನೆ. ಈ ರಾಜ್ಯದಗೋಜು ನನಗೆ ಬೇಕಿಲ್ಲದೆ, ತಮ್ಮನಾದ ಸಂಗನಾಯಕನಿಗೆ ಬಿಟ್ಟುಕೊಟ್ಟು, ಮೂಲೆಗಾಡಾದ ಪೇಲ್ಬಂಡೆಯನ್ನು ಸೇರಿಕೊಂಡು, ಸಾತ್ವಿಕರೀತಿಯಿಂದ ಕಾಲಕಳೆದುಕೊಂಡಿದ್ದೆನು. ಕಾಲವೈಪರೀತ್ಯದಿಂದ ಸಂಗನಾಯಕನು ದುರ್ಮರಣದ ಪಾಲಾದನು. ನಾನು ಪುನಹ ರಾಜ್ಯಭಾರದ ಗೊಂದಲದಲ್ಲಿ ಬಂದು ಬೀಳಲಾರೆನು. ಬಂದರೂ ರಾಜ್ಯಕಾರ್ಯವು ನನ್ನಿಂದ ಸರಿಯಾಗಿ ನಡೆಯಲಾರದು. ರಾಜ್ಯವು ವೀರಭೋಜ್ಯವು. ಮಹಾಕಾಳಿಯು ನಿಮಗೆ ಅಂಥಾ ವೀರನನ್ನು

ದಯಪಾಲಿಸಿರುವಳು. ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ, ನಮಗೆ ಬೆಂಬಲವಾಗಿ ಬಂದು, ರಾಜಪುತ್ರಿಯ ಮಾನರಕ್ಷಣೆಯನ್ನು ಮಾಡಿ, ನಿಮ್ಮನ್ನು, ನನ್ನನ್ನು, ಕುಸುಮಕೋಮಲೆಯಾದ ಲಾವಣ್ಯವತಿಯನ್ನು ಕಠಿಣಾತ್ಮನಾದ ನರಸನಾಯಕನ ಹಾವಳಿಯಿಂದ ಕಾಪಾಡಿದ ವೀರಾಗ್ರೇಸರನಿಗೆ, ರಾಮನಾಯಕನಿಗೆ, ನಾವುಮಾಡಿದ ಪ್ರತ್ಯುಪಕಾರವೇನು? ಅರ್ಪಿಸಿದ ಕಾಣಿಕೆಯೇನು? ಏನೊಂದೂ ಇಲ್ಲ. ಆತನ ಮಹೋಪಕಾರಕ್ಕೆ ಪ್ರತೀಕಾರವಾಗಿ ಈ ಅಲ್ಪರಾಜ್ಯವನ್ನು ಕೊಟ್ಟು, ಆತನ ಪಾದಸೇವೆಯಲ್ಲಿ ನಿಲ್ಲೋಣ. ಸಂಗನಾಯಕನಿಗೆ ಲಾವಣ್ಯವತಿಯೊಬ್ಬಳೇ ಕುವರಿಯು. ನಾನಾದರೆ ಸಂತಾನಹೀನನು. ಇಂದಿಲ್ಲದಿದ್ದರೂ ನಾಳೆಯಾದರೂ ರಾಜ್ಯವು ರಾಮನಾಯಕನದೇ. ಅದನ್ನು ಈಗಲೇ ಆತನಿಗೆ ಸಮರ್ಪಣೆಮಾಡಿ, ಸಿಂಹಾಸನದಮೇಲೆ ಕುಳ್ಳಿರಿಸಿ ಅಭಿಷಿಕ್ತನನ್ನುಮಾಡೋಣ. ಇನ್ನು ತಡಮಾಡಬಾರದು. ಸುಮುಹೂರ್ತವು ಸಮೀಪಿಸುತ್ತಲಿದೆ. ಸರ್ವವೂ ಸಿದ್ಧವಾಗಿಯೇ ಇದೆ. ರಾಮನಾಯಕನಿಗೆ ಪಟ್ಟವನ್ನುಕಟ್ಟಿ ಈ ರಾಜ್ಯವನ್ನು ರಾಮರಾಜ್ಯವನ್ನಾಗಿ ಮಾಡೋಣ." ಎಂದು ನುಡಿದದ್ದು ಕೇಳಿ ಸಭಿಕರು ಮತ್ತಿಷ್ಟು ಉತ್ಸಾಹಪೂರಿತರಾಗಿ, "ಜಯಾ ರಾಮನಾಯಕಗೆ ಜಯಾ, ನಿಡುಗಲ್ಲು ರಾಜನಿಗೆ ಜಯಾ" ಎಂದು ಜಯ ಧ್ವನಿಮಾಡಿದರು. ರಾಮನಾಯಕನು ಎದ್ದುನಿಂತು ತನ್ನ ಮನವಿಯನ್ನು ಹೇಳಿಕೊಳಬೇಕೆಂದರೆ ಕೇಳುವರೇ ಇರಲಿಲ್ಲ ಆ ಸಭಾಮಂಟಪವು ಜಯ ಜಯ ಶಬ್ದವನ್ನು ಪ್ರತಿಧ್ವನಿಗೊಡುತ್ತಿದ್ದಿತು ಸಭಿಕರ ಉತ್ಸಾಹವು ಮಿತಿಮೀರಿತ್ತು. ಕೆಲವು ಹೊತ್ತಿನ ವರೆಗೂ ಅವರು ಸಂತೋಷವನ್ನು ಹಿಡಿಯಲಾರದೆ ಉನ್ಮಾದಾವಸ್ಥೆಯಲ್ಲಿದ್ದಂತೆ ಇದ್ದರು ಅವರ ಆನಂದಕ್ಕೆ ಎಣೆಯೇ ಇರಲಿಲ್ಲ. ಬಹಳ ಹೊತ್ತಿನಮೇಲೆ ಆ ಧ್ವನಿಯು ಕಮ್ಮಿಯಾಯಿತು. ರಾಮನಾಯಕನು ತಮಗೇನೋ ಹೇಳಲು ಎದ್ದುನಿಂತಿರುವನೆಂದು ಗ್ರಹಿಸಿದರು. ತಮ್ಮ ಕಲಕಲವನ್ನು ನಿಲ್ಲಿಸಿ ತದೇಕ ಚಿತ್ತರಾಗಿ ಆತನು ಏನು ಹೇಳುವದು ಕಿವಿಗೊಟ್ಟು ಕೇಳಲು ಕುತೂಹಲಪಡುತ್ತಿದ್ದರು. ಆತನು ತನ್ನ ಗಂಭೀರವಾಣಿಯಿಂದ ಈ ರೀತಿ ನುಡಿದನು.

“ ವೀರಪುಂಗವರೇ ! ನಿಡುಗಲ್ಲಿಗೆ ದೊರೆಯೊಬ್ಬನು ಬೇಕೇಬೇಕು. ಬಸಪ್ಪನಾಯಕನವರು ಅದನ್ನು ತೃಣಪ್ರಾಯವಾಗಿ ಬಿಟ್ಟುಕೊಟ್ಟಿರುವರು. ಅವರ ತ್ಯಾಗವು ಹೊಗಳಲು ಸಾಧ್ಯವಿಲ್ಲ. ಭಾರವು ನನ್ನ ಮೇಲೆ ಹಾಕಿರುವರು. ಅಭಿಷೇಕದ ಮುಹೂರ್ತವು ಸಮೀಪಿಸಿತು. ಮುಹೂರ್ತವನ್ನು ತಪ್ಪಿಸಿ ಇಂಥಾ ಘನಕಾರ್ಯಗಳನ್ನು ಮಾಡಬಾರದು. ನಾವು ತಡಮಾಡದೆ ಮುಂದೆ ಜರುಗಬೇಕಾದ ಏರ್ಪಾಟುಗಳನ್ನು ಮಾಡಬೇಕಾಗಿದೆ. ನೀವೆಲ್ಲರೂ ನನಗೆ ತೋರಿಸಿದ ವಾತ್ಸಲ್ಯಕ್ಕೆ ಕೃತಜ್ಞನಾಗಿದ್ದೇನೆ. ನಾನು ನಿಮಗೆ ಮಾಡಿದ ಉಪಕಾರವು ಸ್ವಲ್ಪ. ನೀವು ನನಗೆ ಮಾಡಿರುವ ಬಹುಮಾನವು ವಿಶೇಷ. ಕ್ಷತ್ರಿಯವಂಶಸಂಜಾತೆಯಾದ ಲಾವಣ್ಯವತಿಯ ಮೇಲೆ ಗುಲಾಮನಾದ ನರಸನಾಯಕನು ಕೈಹಾಕುವ ವೇಳೆಯಲ್ಲಿ ಯಾರು ತಾನೇ ಸುಮ್ಮನಿರಬಲ್ಲರು? ವೀರಧರ್ಮವನ್ನನುಸರಿಸಿ ಆಕೆಯ ಮಾನರಕ್ಷಣೆಮಾಡಲು ಬಂದೆನು ಅದು ನನ್ನ ಕರ್ತವ್ಯವಾಗಲ, ನಿಮಗಾಗಿ ಮಾಡಿದ್ದೇನೂ ಇಲ್ಲ. ಅದಕ್ಕೆ ಪ್ರತಿಯಾಗಿ ನೀವು ಆ ಗುಣಮಣಿಯಾದ ರಾಜಕುಮಾರಿಯನ್ನೇ ಧಾರೆಯೆರೆದಿರುವಿರಿ. ನಿಮಗೆ ನಾನು ಋಣಿಯಾಗಲಿ, ನನಗೆ ನೀವು ಎಷ್ಟುಮಾತ್ರಕ್ಕೂ ಋಣಿಗಳಲ್ಲ. ಭುಜಬಲದಿಂದ ಇಂಥಾ ರಾಜ್ಯಗಳನ್ನೆಷ್ಟಾದರೂ ಸಂಪಾದಿಸಬಲ್ಲೆನು. ಲಾವಣ್ಯವತಿಯಂಥ ಸೌಭಾಗ್ಯಲಕ್ಷ್ಮಿಯು ಲಭಿಸುವುದು ಪೂರ್ವ-ಜನ್ಮದ ಸುಕೃತದಫಲವಲ್ಲದೇ ಬೇರೊಂದಲ್ಲ. ಅಂಥಾಕೆಯನ್ನು ನೀವು ನನಗೆ ಮನಃಪೂರ್ವಕವಾಗಿ ದಯಪಾಲಿಸಿರುವಿರಿ. ಅದಕ್ಕಿಂತಲೂ ಹೆಚ್ಚಿನದು ನೀವು ಕೊಡಲಾರಿರಿ. ನಾನೂ ಅಪೇಕ್ಷಿಸುವುದಿಲ್ಲ.

ರಾಜ್ಯವು ತನಗೆ ಬೇಕಿಲ್ಲವೆಂದು ಬಸಪ್ಪನಾಯಕನು ಅಪ್ಪಣೆ ಕೊಟ್ಟಿರುವನು. ನಾನೂ ಅದನ್ನು ಸ್ವೀಕರಿಸುವುದಿಲ್ಲವೆಂದು ಅರಿಕೆ ಮಾಡಿಕೊಂಡಿರುವೆನು. ನಿಮ್ಮಲ್ಲಿ ಅರ್ಹರಾದವರು ಯಾರಾದರೂ ಇದ್ದರೆ ಚುನಾಯಿಸಿಕೊಳ್ಳಬೇಕು. ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ನಾನು ಹೊರಟುಹೋಗುವೆನು. ಅಂತಹ ವೀರರು

ಯಾರೂ ಇಲ್ಲದೆಹೋದರೆ, ರಾಜವಂಶೋದ್ಭವನೂ, ಸಕಲವಿದ್ಯಾ ಪಾರಂಗತನೂ, ಶೂರಶಿಖಾಮಣಿಯೂ ಓರ್ವನಿರುವನು. ಆತನನ್ನು ಈ ರಾಜ್ಯಕ್ಕೆ ಅಧಿಪತಿಯನ್ನುಮಾಡುವುದು ನನಗೆ ಸಂತೋಷದಾಯಕವಾದ ಕೆಲಸ. ಆತಗೆ ನೀವೂ, ನಾನೂ, ಬಸಪ್ಪನಾಯಕನೂ, ಲಾವಣ್ಯವತಿಯೂ, ಅವರಿವರೆಂಬುವದೇನು ಸರ್ವರೂ ಋಣಿಗಳಾಗಿರುವೆವು. ಆತನ ಸಹಾಯದಿಂದಲೇ ಈ ದಿನದ ವಿವಾಹವು ನಿರ್ವಿಘ್ನವಾಗಿ ಜರುಗಿದ್ದು. ಆತನ ಪರಾಕ್ರಮದಿಂದಲೇ ನರಸನಾಯಕನು ಹಿಂದಿರುಗಿ ಓಡಿಹೋದದ್ದು. ಆತನ ಭಕ್ತಿವಾತ್ಸಲ್ಯಗಳಿಂದಲೇ ರತ್ನಗಿರಿರಾಜ್ಯವು ತೇಜಸ್ಸಿನಿಂದ ಮೆರೆಯುತ್ತಿರುವುದು ಆತನಾರೆಂದರೆ, ನನ್ನ ಮುಖ್ಯಮಂತ್ರಿಯೂ, ಬಾಲ್ಯಮಿತ್ರನೂ, ಮದ್ಯಂತ ಜನೂ, ಚಿತ್ರದುರ್ಗದ ಜಟಂಗರಾಜನ ಅಳಿಯನೂ ಆದ ಭೀಮ ನಾಯಕನು. ಆತನು ಈ ರಾಜ್ಯಕ್ಕೆ ತಕ್ಕದೊರೆಯು. ಆತನಿಗೆ ಪಟ್ಟಾಭಿಷೇಕವು ಮಾಡಲು ನೀವು ಅನುಮತಿಕೊಟ್ಟರೆ, ಆ ಕಾರ್ಯವನ್ನು ಈಗಲೇ ಪೂರೈಸುವ. ನಾನು ಬೇರೆ, ಭೀಮನಾಯಕನು ಬೇರೆ ಅಲ್ಲ. ನಮಗೆ ಕಾಯಮಾತ್ರ ಭೇದವೇ. ಆತಗೆ ಮಾಡಿದ ಗೌರವವು ನನಗೆ ಮಾಡಿದಂತೆ. ಇಷ್ಟೇ ಅಲ್ಲದೆ, ಆತನು ನಮಗೆ ಈ ಕಾರ್ಯದಲ್ಲಿ ಮಾಡಿದ ಉಪಕಾರಕ್ಕೆ ಎಷ್ಟು ಪ್ರತ್ಯುಪಕಾರಮಾಡಿದರೂ, ಗೌರವಿಸಿದರೂ ಸಾಲದು. ಈ ಅಲ್ಪರಾಜ್ಯವನ್ನು ಕೊಡಲು ಹಿಂದೂ ಮುಂದೂ ನೋಡಬೇಕಾಗಿದ್ದಿಲ್ಲ." ಎಂದು ನುಡಿದನು ಸಭಿಕರು ರಾಮನಾಯಕನ ಔದಾರ್ಯಕ್ಕೆ ಮೆಚ್ಚಿ ಶ್ಲಾಘನೆಮಾಡಿದರು. ಭೀಮನಾಯಕನನ್ನು ಸಿಡುಗಲ್ಲಿಗೆ ರಾಜನನ್ನು ಮಾಡಲು ಸರ್ವರೂ ಸಮ್ಮತಪಟ್ಟರು. ಆದರೆ ಭೀಮನಾಯಕನೆಲ್ಲಿದ್ದಾನೆ? ಸೈನ್ಯಯುತನಾಗಿ ಹಿಂದೆಬರುತ್ತಿರುವನೆಂದು ಚಾರರು ಹೇಳಿದ್ದರಷ್ಟೇ? ಆದ್ದರಿಂದ ಜಾಗ್ರತೆ ಕರೆದು ತರಬೇಕೆಂದು ಭಟರನ್ನು ಕಳುಹಿಸಿಕೊಟ್ಟರು. ಸಗೌರವದಿಂದ ಇದಿರುಗೊಂಡು ಬಂದು ಸಿಂಹಾಸನದಮೇಲೆ ಕುಳ್ಳಿರಿಸಿ ರಾಜ್ಯಾಭಿಷೇಕಮಾಡಲೆಣಿಸಿ ಸರ್ವರೂ ಪೆನುಗೊಂಡೆಯ ಮಾರ್ಗವನ್ನು ನಿರೀಕ್ಷಿಸುತ್ತಿದ್ದರು. ತಮಗೆ ಪ್ರಭುವಾಗಲಿರುವ ಆ ಸುಕು

ಪೂರನು, ತಮ್ಮ ಪ್ರಬಲಶತ್ರುವಾದ ನರಸನಾಯಕನನ್ನು ಹಿಮ್ಮೆಟ್ಟಿಸಿದ ಆ ವೀರನು, ವೀರಾಂಗನೆಯೆಂದು ಹೆಸರುಪಡೆದಿದ್ದ ಚಿತ್ರದುರ್ಗದ ರಾಜಕುಮಾರಿ ರಂಗನಾಯಕಿಯನ್ನು ಕೈ ಹಿಡಿದಿದ್ದ ಆ ಶೂರನು ಎಂತಿರುವನು, ಯಾವಾಗಬರುವನು, ಯಾವಾಗನೋಡುವೆವೆಂದು ಕಾದಿದ್ದರು.

ಇನ್ನೆಲ್ಲಿಯಭೀಮನಾಯಕನು? ಸ್ವಾಮಿಕಾರ್ಯಧುರಂಧರನಾಗಿ, ದುರದಲ್ಲಿ ಮಡಿದು, ವೀರಸ್ವರ್ಗದ ಸಿಂಹಾಸನವನ್ನೇರಲು ಸಾರಿ ಹೋಗಿದ್ದನು. ನಿಡುಗಲ್ಲಿಗೆಂತುಬಂದಾನು? ನಿಡುಗಲ್ಲು ರಾಜ್ಯವನ್ನವನು ಏನುಮಾಡ್ಯಾನು? ನಿಡುಗಲ್ಲು ರಾಜ್ಯದ ಪ್ರಜೆಗಳಿಗೆ ಅವನ ದರ್ಶನವು ಎಂತು ಲಭಿಸಬಲ್ಲದು? ಆದರೆ ಆತನ ಮರಣವಾರ್ತೆಯು ಯಾರಿಗೂ ತಿಳಿದಿರಲಿಲ್ಲ. ಮುಹೂರ್ತವನ್ನು ಮೀರಿಸಬಾರದೆಂಬುವದು ಎಲ್ಲರ ಅಭಿಮತವಾಗಿದ್ದಿತು. ಭೀಮನಾಯಕನು ಏನು ಕಾರಣಬರಲಿಲ್ಲವೋ ತಿಳಿಯದೇಹೋಗಿತ್ತು. ಏನುಮಾಡಬೇಕೆಂದು ಬಸಪ್ಪನಾಯಕನು ಗುರಿಹಿರಿಯರನ್ನು ಕೇಳಿದನು. ಭೀಮನಾಯಕನಿಲ್ಲದೇ ಹೋದರೂ ಆತನ ಹೆಸರಿನಮೇಲೆ ಸಿಂಹಾಸನದ ಮೇಲೊಂದು ಖಡ್ಗವನ್ನಿಟ್ಟು ಅಭಿಷೇಕಮಾಡಿದರೆ ಆತನಿಗೆ ಪಟ್ಟಾಭಿಷೇಕ ಮಾಡಿದಂತೆಯೇ ಎಂದು ಮಂತ್ರಾಲೋಚನೆಯನ್ನು ಹೇಳಿದರು. ಅದಕ್ಕೆ ಸರ್ವರೂ ಸಮ್ಮತಪಟ್ಟರು. ಮತ್ತೊಮ್ಮೆ ಪೆನುಗೊಂಡೆಯ ದಾರಿಯನ್ನು ನೋಡಿದರು. ಭೀಮನಾಯಕನು ಬರುವ ಚಿನ್ಹೆಗಳು ಕಾಣಲಿಲ್ಲ. ಸಕಾಲಕ್ಕೆ ಬರುವನೆಂಬ ಆಶೆಯು ನಿರಾಶೆಯಾಯಿತು. ಸುಮುಹೂರ್ತವು ಸಮೀಪಿಸಿತು. ಸಿಂಹಾಸನದ ಮೇಲೆ ಖಡ್ಗ ಒಂದನ್ನಿಟ್ಟು ಭೀಮನಾಯಕನನ್ನು ನಿಡುಗಲ್ಲುರಾಜ್ಯಕ್ಕೆ ಪಟ್ಟಾಭಿಷಿಕ್ತನನ್ನಾಗಿ ಮಾಡಿದರು.

ವಾಚಕರೇ! ಇದೇ ಮುಹೂರ್ತದಲ್ಲಿಯೇ ರಣರಂಗದಲ್ಲಿ ಭೀಮನಾಯಕನ ಶಿರವು ಮುಂಡದಿಂದ ಬೇರೆಯಾಗಿ ನೆಲಕ್ಕೆಬಿದ್ದದ್ದು!

ಆತನ ಮರಣವು ವೀರಮರಣವೆಂಬುವುದರಲ್ಲಿ ಸಂದೇಹವೇನೂ ಇಲ್ಲ. ಆತಗೆ ವೀರಸ್ವರ್ಗಸಿಂಹಾಸನಾಭಿಷೇಕವು ಆಯಿತೋ ಇಲ್ಲವೋ ನಾವೇನುಬಲ್ಲೆವು? ಭೂಲೋಕದಲ್ಲಿ ಮಾತ್ರ ಕೀರ್ತಿಶೇಷನಾದ ಆ ಶೂರನಿಗೆ ಅತುಲ ವೈಭವದಿಂದ ಸಿಡುಗಲ್ಲು ರಾಜ್ಯಕ್ಕೆ ಪಟ್ಟಾಭಿಷೇಕವಾಯಿತು. ಸಿಂಹಾಸನವು ಥಗಥಗನೆ ಮೆರೆಯುತ್ತಿತ್ತು. ಅದರ ಮೇಲಿನ ಖಡ್ಗವು ಥಳಥಳನೆ ಹೊಳೆಯುತ್ತಿತ್ತು. ವಿವಿಧ ಪುಷ್ಪಗಳ ಮಾಲೆಯಿಂದಲೂ, ಮುತ್ತಿನ ಸರಗಳಿಂದಲೂ, ಅದನ್ನು ಅಲಂಕರಿಸಿದ್ದರು. ಎಡಭಾಗದಲ್ಲಿ ಬಸಪ್ಪನಾಯಕನು ಚಾಮರವನ್ನು ಹಾಕುತ್ತಿದ್ದನು. ಬಲಭಾಗದಲ್ಲಿ, ಪ್ರಿಯವಾಚಕರೇ! ನಮ್ಮ ರಾಮನಾಯಕನು ದರಹಸಿತವದನಾರವಿಂದನಾಗಿ, ಸ್ವಹಸ್ತದಲ್ಲಿ ಚಾಮರವನ್ನು ಹಿಡಿದು ಬೀಸುತ್ತಿದ್ದನು. ಯಾರ ಸಿಂಹಾಸನಕ್ಕೆ? ಆದಿನದ ವರೆಗೂ ತನ್ನ ಕೈಕೆಳಗೆ ಮಂತ್ರಿಯಾಗಿದ್ದ ಭೀಮನಾಯಕನ ಸಿಂಹಾಸನಕ್ಕೆ! ತಾನಾಗಿತಾನು ದಾನಮಾಡಿದ ಸಿಂಹಾಸನಕ್ಕೆ!! ಆಹಾ! ಅದು ಏನು ಔದಾರ್ಯ, ಏನುಕೃತಜ್ಞತೆ, ಏನು ಮಿತ್ರವಾತ್ಸಲ್ಯ. ಆತನ ವಾಮಭಾಗದಲ್ಲಿ ನಿಂತಿದ್ದ ಲಾವಣ್ಯವತಿಯು ಆನಂದಸಾಗರದಲ್ಲಿ ತೇಲಿಹೋಗುತ್ತಿದ್ದಳು. ನಾಯಕರೆಲ್ಲರೂ ಒಬ್ಬರಿಂದೊಬ್ಬರು ಮುಂದಕ್ಕೆ ಬಂದು ಸಿಂಹಾಸನಕ್ಕೆ ಜೋಹಾರುಮಾಡಿ ಹೋಗುತ್ತಿದ್ದರು. ಕಿವಿಗೆ ಇಂಪಾಗಿ ದಿವ್ಯವಾದ್ಯಗಳು ಕೇಳಿಸುತ್ತಿದ್ದವು. "ಜಯಾ! ಭೀಮನಾಯಕಗೆ ಜಯಾ! ಸಿಡುಗಲ್ಲು ರಾಜನಿಗೆ ಜಯಾ!" ಎಂಬಶಬ್ದವು ಕೋಟೆಯಲ್ಲೆಲ್ಲ ಪ್ರತಿಧ್ವನಿಗೊಡುತ್ತಿತ್ತು. ಭೀಮನಾಯಕನಿಗೆ ಪಟ್ಟಾಭಿಷೇಕವಾಯಿತು! ಭಗವಂತನ ಲೀಲೆಯಲ್ಲಿ ಇಂಥ ಅಸಂದರ್ಭವಾದ ಕಾರ್ಯಗಳು ಎಷ್ಟೋ ಜರುಗಿಹೋಗುತ್ತಿವೆ!!

ಬಸಪ್ಪನಾಯಕನು ಮಗಳನ್ನು ಆಲಿಂಗನಗೈದು, ಅಳಿಯನನ್ನಾಶೀರ್ವದಿಸಿ, ತನ್ನ ಪಟ್ಟಣಕ್ಕೆ ಪ್ರಯಾಣಮಾಡಿದನು. ಅವರಿಬ್ಬರೂ ಸೈನ್ಯಯುತರಾಗಿ ಆತನನ್ನು ಕಳುಹಿಸಲು ಹೋದರು. ಹಿಂದಿರುಗಿ ಬರುವ ಸಮಯದಲ್ಲಿ ಲಾವಣ್ಯವತಿಯು ಬಿಕ್ಕಿ ಬಿಕ್ಕಿ ಅತ್ತಳು. ಬಸಪ್ಪ

ನಾಯಕನು ಹೀಗೆಂದು ಸಮಾಧಾನ ಹೇಳಿದನು. "ಮಗಳೇ! ನೀನು ದುಃಖಿಸುವುದೇತಕ್ಕೆ? ತಂದೆಗಾಗಿ ನೀನು ಮರುಗಿದರೆ ಫಲವಿಲ್ಲ. ಆತನು ತಿರುಗಿ ಬರಲಾರನು. ಅದೊಂದು ಬಿಟ್ಟರೆ ನಿನಗೆ ಬೇರೆಯೇನೂ ಕೊರತೆಯಿಲ್ಲ ನಿನ್ನ ಜನಕನ ರಾಜ್ಯವು ಜೀರ್ಣೋದ್ಧಾರವಾಯಿತು. ಅದಕ್ಕೆ ಯೋಗ್ಯನಾದ ಪತಿಯು ಲಭಿಸಿದನು. ಇಷ್ಟಕ್ಕೆಲ್ಲ ಸಹಾನುಭೂತನೂ, ನೀನು ಮನಸಾರವರಿಸಿದ್ದ ವೀರನೂ ನಿನಗೆ ದೊರೆತನು. ನೀನು ದುಃಖಿಸಬಾರದು. ನಾನು ಹೋಗಿ ಬರುವೆನು. ಭೀಮನಾಯಕನು ಬಂದನಂತರ ರಾಜ್ಯವನ್ನಾತನಿಗೆ ಒಪ್ಪಿಸಿ, ನೀವು ನಿಮ್ಮ ಕೋಟೆಗೆ ಪ್ರಯಾಣವನ್ನು ಮಾಡಿರಿ. ಕೆಲವು ದಿನಗಳಮೇಲೆ ನಾನು ರತ್ನಗಿರಿಗೆ ಬಂದು ನಿಮ್ಮನ್ನು ನೋಡಿಕೊಂಡು ಬರುವೆನು.

ರಾಮನಾಯಕನವರೇ! ನಿಮಗೆ ನಾನು ಏನೊಂದೂ ಹೇಳುವಷ್ಟು ಯೋಗ್ಯನಲ್ಲ ಆದರೆ ಹೆಣ್ಣುಹಡೆದಹೊಟ್ಟೆ; ಸುಮ್ಮನಿರಬೇಕೆಂದರೆ ಆಗದು. ಈ ಭ್ರಾಂತಿಯು ಮನುಮುನಿಗಳನ್ನೇ ಬಿಡಲಿಲ್ಲ. ನನ್ನದಾಡೇನು. ಈ ನನ್ನ ಮುದ್ದು ಮಗಳ ಇಹಪರಗಳೆರಡೂ ನಿಮ್ಮಪಾಲಿಗೆ ಬಿದ್ದಿವೆ. ಅನಾಥಳು. ಅಕೆಯ ಲೋಪಗಳೇನಿದ್ದರೂ ಸರಿಪಡಿಸುವವರು ನೀವು ತಪ್ಪಿದರೆ ಈ ಲೋಕದಲ್ಲಿ ಯಾರೂಯಿಲ್ಲ. ಎಂದು ಕಣ್ಣೀರು ತುಂಬಿದನು. ಅದಕ್ಕೆ ರಾಮನಾಯಕನು ಒದಲು ನುಡಿಯಲಾರದೇಹೋದನು ಭಾವಗರ್ಭಿತವಾದ ತನ್ನ ಕಣ್ದಾವರೆಗಳಿಂದ ಅಶ್ರುಕಣಗಳು ಜಾರಿಬಿದ್ದವು. ಬಸಪ್ಪನಾಯಕನು ಪೇಳ್ಬಂಡೆಗೆ ಹೊರಟುಹೋದನು. ರಾಮನಾಯಕನೂ ಲಾವಣ್ಯವತಿಯೂ ಹಿಂದಿರುಗಿಬಂದು, ಭೀಮನಾಯಕನಿಗಾಗಿ ಇದಿರು ನೋಡುತ್ತಿದ್ದರು. ಆತನು ಬರುವನೆಂದೇ ಇನ್ನೂ ಅವರನಂಬಿಕೆ. ರಾಜ್ಯವೈಭವಯುತನಾದ ಆತನನ್ನು ನೋಡಬೇಕೆಂದೇ ಅವರ ಆಶೆ. ಇಹಲೋಕದಲ್ಲಿ ಆತನನ್ನು ನೋಡಲಾರೆವೆಂದು ಅವರೇನು ಬಲ್ಲರು?

---

# ೧೧ನೆಯ ಪ್ರಕರಣ.

**ನಿಡು**ಗಲ್ಲು ರಾಜಬೀದಿಯ ಜಯಜಯಧ್ವಾನಗಳನಡುವೆಯೇ, ಮಂಗಳವಾದ್ಯಗಳ ಮಧ್ಯದಲ್ಲಿಯೇ, ಶೃಂಗಾರನಾಟ್ಯಗಳ ಬಳಿಯಲ್ಲಿಯೇ, ಹೃದಯ ಭೇದಕವಾದ ಸಂತಾಪದಿಂದ ಕಣ್ಣೀರುಸುರಿಸುತ್ತಾ ಈರ್ವರು ಭಟರು ರಾಮನಾಯಕನನ್ನು ನೋಡಲು ಆತುರಪಡುತ್ತಿದ್ದರು. ಸಂತೋಷವು ತಲೆಗೇರಿದ್ದ ಆ ಜನಸಮುದಾಯವು ಅವರ ಕಡೆ ಲಕ್ಷಕೊಡಲಿಲ್ಲ ರಾಮನಾಯಕನಬಳಿಗೆ ಕರೆದೊಯ್ಯಲಿಲ್ಲ. "ಭೀಮನಾಯಕಗೆ ಜಯಾ" ಎಂಬ ಶಬ್ದವು ಅವರ ಕರ್ಣಪುಟಗಳನ್ನು ಮಾತ್ರವೇ ಅಲ್ಲದೆ, ಹೃದಯವನ್ನು ಸಹಾ ಭೇದಿಸುತ್ತಿತ್ತು. ಆ ಭೀಮನಾಯಕನು ದಾರಿರಬಹುದೆಂದು ಅವರು ಯೋಚಿಸುತ್ತಿದ್ದರು. ತಮ್ಮ ಭೀಮನಾಯಕನೆಂದು ಅವರೇನುಬಲ್ಲರು? ರಣರಂಗದಲ್ಲಿ ತಮ್ಮ ನಾಯಕನನ್ನು ಛಿದ್ರಛಿದ್ರವಾಗಿ ವಧಮಾಡಿದ್ದು ಕಣ್ಣಾರೆ ನೋಡಿ ಉಳಿದುಬಂದಿದ್ದವರು ಅವರಿಬ್ಬರೇ. "ಭೂಲೋಕದಲ್ಲಿ ಭೀಮನಾಯಕನಿಗೆ ಇನ್ನೆಲ್ಲಿನ ಜಯ" ಎಂದು ಅವರು ಮರುಗುತ್ತಿದ್ದರಾಗಲಿ, ಆ ವೀರಾಗ್ರಣಿಗೆ ಮರಣಾನಂತರ ಸಹಾ ರಾಜ್ಯಾಭಿಷೇಕವೆಂಬುವದು ಅವರಿಗೆ ಗೊತ್ತಾಗಲಿಲ್ಲ. ಎಷ್ಟೋ ಪ್ರಯಾಸದಿಂದ ಜನಸಮೂಹದಮಧ್ಯ ದಾರಿಮಾಡಿಕೊಂಡು ರಾಮನಾಯಕನ ಅರಮನೆಯನ್ನು ಸೇರಿದರು. ರಾಮನಾಯಕನೂ, ಲಾವಣ್ಯವತಿಯೂ ಅಂತಃಪುರದಲ್ಲಿ ಆನಂದಗೋಷ್ಠಿಯಲ್ಲಿದ್ದರು ಅವರಿಗೆ ಆ ಸಮಯದಲ್ಲಿ ಈ ಲೋಕವೇ ಸ್ವರ್ಗವನ್ನು ಸಹಾ ಮಿಂಚಿದಂತೆ ಇತ್ತು. ಏಕಾಂತದಲ್ಲಿದ್ದರು. ಅಲ್ಲಿಗೆ ಹೋಗಲು ಎಲ್ಲರೂ ಹಿಂಜರಿಯುತ್ತಿದ್ದರು. ಭೀಮನಾಯಕನ ಭೃತ್ಯರಮಾತು ಕಿವಿಯಲ್ಲಿ ಹಾಕಿಕೊಳ್ಳುವವರೇ ಇರಲಿಲ್ಲ. ಅವರಸಂಕಟವು ಮತ್ತಿಷ್ಟುಹೆಚ್ಚಾಯಿತು. ಗೋಳೋ ಎಂದು ಅತ್ತರು. ಭೀಮನಾಯಕನು ಸತ್ತನೆಂಬ ಸಂಕಟ ಒಂದೇ ಅಲ್ಲ. ಹತಶೇಷರಾದ ಸೈನಿಕರೊಡನೆ ಬಂದು ನರಸನಾಯಕನು ವೈಮರೆದು ರಾಣಿವಾಸದಲ್ಲಿದ್ದ ರಾಮನಾಯಕನಮೇಲೆ ಬಿದ್ದಾ

ನೆಂಬ ಭೀತಿಯೊಂದು ಹುಟ್ಟಿತು. ಮೋಸಗಾರನಾದ ನರಸನಾಯ ಕನು ಯಾವಾಗಬರುವನೋ, ಯಾವ ಮಾರ್ಗದಿಂದ ಬರುವನೋ, ಯಾವ ವೇಷದಲ್ಲಿಬರುವನೋ ಯಾರಿಗೆ ಗೊತ್ತು? ರಣಹೇಡಿಯಾದ ಅವನು ಕಳ್ಳದಾರಿಗಳನ್ನು ಹುಡುಕುವುದರಲ್ಲಿ ನಿಸ್ಸೀಮನು. ತಮ ಗಾದರೋ ರಾಮನಾಯಕನ ದರ್ಶನವಾದರೂ ಲಭಿಸುವ ಸಂಭವವಿ ರಲಿಲ್ಲ. ತನ್ನ ಆಪ್ತನು, ಮಿತ್ರನು, ಬಂಧುವು, ಮುಖ್ಯ ಸಚಿವನು ಆದ ಭೀಮನಾಯಕನು ತನಗಾಗಿ ಹೋಡೆದಾಡಿ ಕದನ ರಂಗದಲ್ಲಿ ಮಡಿದು ಹೋಗಿದ್ದ ಸಮಯದಲ್ಲಿ ರಾಮನಾಯಕನು ಆನಂದ ಗೋಷ್ಠಿ ಯಲ್ಲಿ ಇರುವದನ್ನು ನೋಡಿ "ಪಾಳೆಯಗಾರರಿಗೆ ಏನಾದರೂ ಕೇಡು ಗಾಲ ಸಮೀಪಿಸಿತೇ ಏನು?" ಎಂದು ಭಟರು ಮತ್ತೊಮ್ಮೆ ಗೋಳೋ ಎಂದು ಅತ್ತರು.

ಈ ಆರ್ತಧ್ವನಿಯು ಚತುರಳಾದ ಲಾವಣ್ಯವತಿಯ ಕಿವಿಗೆ ಬಿತ್ತು. ಆಕೆಯು ಬೆದರಿದ ಚಿಗರಿಯಂತೆ ಅದು ದಾರದಿರಬಹುದೆಂದು ಕಿವಿಗೊಟ್ಟು ಕೇಳಿದಳು. ತಮ್ಮ ಅರಮನೆಯ ದ್ವಾರದಲ್ಲಿಯೇ ಎಂದು ಗ್ರಹಿಸಿದಳು. ಈ ಶುಭಸಮಯದಲ್ಲಿ ಗೋಳಾಟಕ್ಕೆ ಕಾರ ಣವೇನಿರಬಹುದೆಂಬ ಭಯದಿಂದ "ನಾಥಾ! ಇದೇನು! ಈ ಸಮಯ ದಲ್ಲಿ ಈ ರೋದನೆ! ಅರಮನೆಯ ಮುಂದೆ ಅಳುತ್ತಿರುವ ಅವರು ದಾರಿರಬಹುದು? ಅದು ಕೇಳಿ ನನಗೆ ದಿಗುಲಾಗುತ್ತಲಿದೆ. ಅದರಲ್ಲಿ ಏನೋ ವಿಶೇಷವಿರಬೇಕು. ತಿಳಿದುಕೊಳ್ಳುವ." ಎಂದು ಭೀತಿ ಯಿಂದ ನುಡಿದಳು. "ಇದಕ್ಕಾಗಿ ನೀನು ಭಯಪಡುವುದೇತಕ್ಕೆ? ಅವರು ಯಾರೋ, ಏನು ಕಾರಣ ಗೋಳಿಡುತ್ತಿರುವರೋ ತಿಳಿದು ಕೊಳ್ಳೋಣ." ಎಂದು ರಾಮನಾಯಕನು ಸತೀಮಣಿಗೆ ಸಮಾ ಧಾನ ಹೇಳಿ, ದ್ವಾರಪಾಲಕರನ್ನು ಬರಹೇಳಿದನು. ಅವರು ಬಂದು ಸ್ವಾಮಿಸನ್ನಿಧಿಯಲ್ಲಿ ನಿಂತು ವಂದನೆಮಾಡಿದರು.

**ರಾಮನಾಯಕ**:— ಎಲೋ ದ್ವಾರಪಾಲಕರಿರಾ! ಅರಮ ನೆಯ ಮುಂದೆ ಅಳುತ್ತ ನಿಂತಿರುವವರು ಯಾರು?

**ದ್ವಾರಪಾಲಕ:**— ಪ್ರಭುವೇ ನಾನು ಗಮನಿಸಲಿಲ್ಲ. ಅಂಥವರು ಯಾರೂ ನನ್ನ ಕಣ್ಣಿಗೆ ಬೀಳಲಿಲ್ಲ.

**ರಾಮನಾಯಕ:**—ನೀನು ಎಲ್ಲಿದ್ದೆ ? ಏನು ಮಾಡುತ್ತಿದ್ದೆ ? ನಿಜಹೇಳು.

**ದ್ವಾರಪಾಲಕ:**— ಸ್ವಾಮಿ! ಎಲ್ಲರೊಡನೆ ನಾವೂ ಆಟಪಾಟಗಳ ನಡುವೆ ಬಿದ್ದು ಹೋಗಿದ್ದೆವು.

**ರಾಮನಾಯಕ.**— ಅದು ತಪ್ಪಲ್ಲವೇ ? ಆ ಅಳುತ್ತಿರುವವರು ಯಾರೋ ತಿಳಿದುಕೊಂಡು ಬಾ.

ದ್ವಾರಪಾಲಕನು ಹೊರಟುಹೋಗಿ, ಸ್ವಲ್ಪಕಾಲದಲ್ಲಿಯೇ ತಿರುಗಿ ಬಂದನು

**ದ್ವಾರಪಾಲಕ:**— ಸ್ವಾಮಿ ! ಅವರು ರತ್ನಗಿರಿಯವರಂತೆ ಅವರ ಸಂಕಟಕ್ಕೆ ಕಾರಣವು ಪ್ರಭುಗಳ ಸನ್ನಿಧಿಯಲ್ಲಿಯೇ ಅರಿಕೆ ಮಾಡಿಕೊಳ್ಳುವರಂತೆ. ನನ್ನೊಡನೆ ಎರಡನೆಯ ಮಾತನಾಡುವದು ಕೂಡ ಅವರಿಗೆ ಬೇಕಿಲ್ಲದೆ ಹೋಯಿತು.

**ರಾಮನಾಯಕ:**—ಏನು ? ಏನು ? ರತ್ನಗಿರಿಯ ಭಟರು ಗೋಳಿಡುತ್ತ ನಿಂತಿರುವರೇನು ? ತಡಮಾಡದೆ ಕರೆದುಕೊಂಡು ಬಾ.

ದ್ವಾರಪಾಲಕನು ಹೊರಟುಹೋದನು. ರಾಮನಾಯಕನ ಯೋಚನೆಯು ರತ್ನಗಿರಿಯ ಕಡೆಗೆ ಹೋಯಿತು. ತಾನೂ, ಭೀಮನಾಯಕನೂ ಇಲ್ಲದ ಸಮಯದಲ್ಲಿ ತನ್ನ ಕೋಟೆಗೆ ಏನಾದರೂ ಅಪಾಯ ಸಂಭವಿಸಿತೋ, ಪ್ರಜಾಜನರೇನಾದರೂ ಹಗೆಯರಕೈಗೆ ಬಿದ್ದು ನೊಂದರೋ, ರಕ್ಷಣೆಯಿಲ್ಲದೇ ಅಂತಃಪುರದಲ್ಲಿ ಒಂಟಿಗಳಾಗಿದ್ದ ಸುಕುಮಾರಿ ರಂಗನಾಯಕಿಯಮೇಲೆ ಯಾರಾದರೂ ಕೈ ಹಾಕಿದರೋ, ಏನಿರಬಹುದೆಂದು ಯೋಚಿಸುತ್ತಿದ್ದನು. ರಂಗನಾಯಕಿಯ ಅನುಪಮ ಪರಾಕ್ರಮವು, ಅದ್ವಿತೀಯ ಆತ್ಮಾಹುತಿಯು, ಅಕಾಲ ಮರಣವು ಆತನಿಗೆ ತಿಳಿದೇಯಿರಲಿಲ್ಲ. ಅದಕ್ಕೆ ಅವಕಾಶವು
8] ಇರಲೇ ಇಲ್ಲವಷ್ಟೇ. ಆತನ ಮನಸ್ಸಿನಲ್ಲಿ ಒಂದು ವಿಧವಾದ

ಭೀತಿಯು ಹುಟ್ಟಿತು. ಚಾರರು ಯಾವಾಗ ಬಂದಾರು, ಅವರ ಶೋಕಕ್ಕೆ ಕಾರಣವು ಯಾವಾಗ ತಿಳಿದೀತು, ಎಂದು ಆತುರಪಡುತ್ತಿದ್ದನು. ದ್ವಾರಪಾಲಕರು ಚಾರರನ್ನು ಒಳಗೆ ಕರೆದುಕೊಂಡು ಬಂದರು.

ರಾಮನಾಯಕನನ್ನು ನೋಡಿದೊಡನೆಯೇ ಅವರು ಮತ್ತಿಷ್ಟು ಗೋಳಿಟ್ಟರು. ಆತನ ಪಾದದಮೇಲೆ ಬಿದ್ದು ಹೊರಳಾಡಿದರು.

**ರಾಮನಾಯಕ**:— ಚಾರರೇ ! ಕಾರಣವನ್ನು ತಿಳುಹಿಸದೆ ನೀವು ಒಂದೇ ರೀತಿ ಅತ್ತರೆ ಫಲವೇನು ? ರತ್ನಗಿರಿಯು ಸುರಕ್ಷಿತವೇ ? ಪ್ರಜೆಗಳು ಸುಖಿಗಳೇ ? ರಂಗನಾಯಕಿಗೆ ಕ್ಷೇಮವೇ ?

**ಚಾರ**:— ಸ್ವಾಮೀ ! ಇನ್ನೆಲ್ಲಿಯ ರಂಗನಾಯಕಿ ?

**ರಾಮನಾಯಕ**:—ಏನು ? ಏನು ? ರಂಗನಾಯಕಿ ಇಲ್ಲವೇ ?

**ಚಾರ**:— ಇಲ್ಲ, ಪ್ರಭೂ ! ಆಕೆ ತನ್ನ ಕೈಯಿಂದಲೇ ತನ್ನ ತಲೆಯನ್ನು ಕಡಿದು ಹಾಕಿಕೊಂಡಳು !

**ರಾಮನಾಯಕ**:— ಅಯ್ಯೋ ! ರಂಗನಾಯಕಿಯು ಆತ್ಮಹತ್ಯಮಾಡಿಕೊಂಡಳೇ ? ಇನ್ನೇನುಗತಿ ? ಭೀಮನಾಯಕನಿದನ್ನು ಕೇಳಿ ಹೇಗೆ ಬದುಕುವನು ? ನನ್ನಮೇಲಿನ ಭರವಸೆಯಿಂದ ಮಗಳನ್ನು ಕೊಟ್ಟಿದ್ದ ಜಟಂಗರಾಜರಿಗೆ ಮುಖವನ್ನು ಹೇಗೆ ತೋರಿಸಲಿ ? ಎಂಥಾ ನಾರೀಮಣಿಗೆ ಎಂಥಾ ದುರ್ಮರಣವು ಒದಗಿತು ! ಅದಕ್ಕೆ ಕಾರಣ ವಿಭೂತನಾದ ಕಿರಾತನು ದಾವನು ? ಅವನನ್ನು ನನ್ನ ಕೋಪಾಗ್ನಿಗೆ ಬಲಿಕೊಡದೆ ಬಿಡುವೆನೇ ? ಅವನ ಹೆಸರನ್ನು ಹೇಳಿರಿ.

**ಚಾರ**:— ಅದನ್ನೇನೆಂದು ಹೇಳಲಿ ?

**ರಾಮನಾಯಕ**:— ಏತಕ್ಕೆ ಹೇಳಬಾರದು ?

**ಚಾರ**:— ಅಮ್ಮನವರ ಸಾವಿಗೆ ಕಾರಣ ಭೀಮನಾಯಕರೇ !

**ರಾಮನಾಯಕ**:— ರಂಗನಾಯಕಿಯ ಸಾವಿಗೆ ಭೀಮನಾಯಕನು ಹೇಗೆ ಕಾರಣವಾದನು ?

**ಚಾರ:—** ಅಮ್ಮನವರನ್ನು ಬಿಟ್ಟು ಪಾವಗಡಕ್ಕೆ ಪ್ರಯಾಣ ಮಾಡಲು ಭೀಮನಾಯಕನವರು ಹಿಂದೂ ಮುಂದೂ ನೋಡುತ್ತಿದ್ದರು. ನೀವು ಸೈನ್ಯವನ್ನೆಲ್ಲಾ ಅವರ ವಶಮಾಡಿ ನಿಡುಗಲ್ಲಿಗೆ ಬಂದು ಬಿಟ್ಟಿದ್ದಿರಿ. ನರಸನಾಯಕನು ನಿಡುಗಲ್ಲು ಸೇರಿದ್ದೇ ನಿಜವಾದರೆ ಇಲ್ಲಿ ಅನಾಹುತಗಳಾಗಿತೀರುವವೆಂದು ಆ ತಾಯಿ ನಂಬಿದ್ದಳು. ಮುಂಚೆಯೇ ಹೋಗಿ ಪಾವಗಡದ ಹತ್ತಿರ ಹೊಂಚುಹಾಕಿಕೊಂಡು ಅವನನ್ನು ಹಿಂದಕ್ಕೆ ಅಟ್ಟಲು ಗಂಡನನ್ನಾಕೆ ಪರಿಪರಿವಿಧದಲ್ಲಿ ಪ್ರೋತ್ಸಾಹಗೊಳಿಸಿದಳು. ವೀರಧರ್ಮವನ್ನು ತಿಳಿಸಿದಳು, ನೆಟ್ಟಗೆ ಬೋಧಿಸಿದಳು. "ಸ್ವಾಮಿದ್ರೋಹ ಮಾಡಬೇಡರಿ" ಎಂದು ಬೇಡಿಕೊಂಡಳು. ಅವರ ಹೇಡಿತನಕ್ಕೆ ರೋಸಿಗೊಂಡು ಸಿಟ್ಟು ಮಾಡಿದಳು. ಏನುಮಾಡಿದರೂ ಫಲವಾಗಲಿಲ್ಲ. ಭೀಮನಾಯಕನವರ ಮನಸ್ಸು ಚಂಚಲ ಭಾವವನ್ನು ಬಿಟ್ಟು ಬಿಡಲಿಲ್ಲ. ಅಮ್ಮನವರ ಮೇಲಿನ ಮಮತೆಯು ಅವರಿಗೆ ಕಡಿಮೆ ಆಗಲಿಲ್ಲ. ಪಾವಗಡಕ್ಕೆ ಅವರು ಪ್ರಯಾಣ ಮಾಡಲಿಲ್ಲ. ಅಮ್ಮನವರು ಅದಕ್ಕೆ ತಾನೇ ಕಾರಣವೆಂದು ಅಂದುಕೊಂಡರು. ಅದರಿಂದ ಉಂಟಾಗುವ ಅನಾಹುತಗಳು ಘೋರವೆಂದು ತಿಳಿದರು. ಪ್ರಾಣವನ್ನು ತೃಣಪ್ರಾಯವಾಗಿ ಎಣಿಸಿದರು. ಸರ್ವಶಾಂತಿಗೋಸುಗವೆಂದು ತನ್ನ ಕೈಯಿಂದ ಶಿರವನ್ನು ಕಡಿದು ಮಹಾಕಾಳಿಗೆ ಬಲಿಕೊಟ್ಟರು.

ರಾಮನಾಯಕನು ಈ ಮಾತುಗಳನ್ನು ಕೇಳಿ ಬುಡಕಡಿದ ಬಾಳೆಯಂತೆ ನೆಲಕ್ಕೆಬಿದ್ದನು. ಆತನಮನಸ್ಸು ಶೋಕವೆಂಬ ಕಿಚ್ಚಿನಲ್ಲಿಬೆಂದು ಹೋಗುತ್ತಿತ್ತು. ಬಹಳಕಾಲ ಮಾತನಾಡದೆ ಹೋದನು. ಕೊನೆಗೆ "ಅಯ್ಯೋ! ವೀರವನಿತೇ! ರಂಗನಾಯಕೀ! ಎಂಥಾಸಾಹಸ ಮಾಡಿದೆ? ಏನುಗತಿಯಾದೆ? ನಿನ್ನ ಋಣವನ್ನು ನಾನೆಂತು ತೀರಿಸಲಿ?, ಕೊನೆಗೆ ನಿನ್ನ ಪ್ರಾಣಕ್ಕೆ ನಾನೇ ಮೂಲವಾದೆನೇ?" ಎಂದು ದುಃಖಿಸಿದನು. ಲಾವಣ್ಯವತಿಯು "ನಾಥಾ! ಈ ಸಂಕಟಕ್ಕೆಲ್ಲಾ ಕಾರಣಭೂತಳು ನಾನು. ನನಗೋಸ್ಕರ ಅಲ್ಲವೇ ನೀವು ಯುದ್ಧ

ಮಾಡಬೇಕಾಗಿ ಬಂದದ್ದು? ವಿವಾಹವಾದ ಮೂರನೆಯದಿನದಲ್ಲಿಯೇ ದಂಪತಿಗಳನ್ನು ಅಗಲಿಸಿ ಭೀಮನಾಯಕನನ್ನು ಶತ್ರುಗಳಮೇಲೆ ಕಳು ಹಿಸಿದ್ದು. ಆತನನ್ನು ಪ್ರೋತ್ಸಾಹಮಾಡಲು ಪ್ರಾಣವನ್ನೇ ಅರ್ಪಿಸಿ ದಳೇ! ಆ ನಾರೀಮಣಿಯ ಮನೋಬಲವು ಎಷ್ಟಿರಬೇಕು? ಅಂಥಾ ಆತ್ಮಾಹುತಿಯು ಹಿಂದೆ ಇಲ್ಲ. ಮುಂದೆ ಇರಲಾರದು. ಆ ಮಹಾ ಮಹಿಮಳ ವಿಯೋಗದಿಂದ ಭೀಮನಾಯಕನು ಎಷ್ಟು ಸಂಕಟಪ ಡುತ್ತಿರುವನೋ! ಆ ಸಂಕಟವನ್ನು ಸಹಾ ನುಂಗಿಕೊಂಡು ಸ್ವಾಮಿ ಕಾರ್ಯದಲ್ಲಿ ನಿಮಗ್ನನಾಗಿ, ನರನನಾಯಕನನ್ನು ಓಮ್ಮೆಟ್ಟಿಸಿದನೇ! ಅದೆಂತಹ ದೃಢಭಕ್ತಿ! ಅದೇನು ಸ್ಥೈರ್ಯ! ಆತನು ಯಾವಾಗ ಬರುವನೋ? ನಮ್ಮ ಸಂಕಟವು ಆತನ ಸಂತಾಪದಲ್ಲಿ ಸಹಸ್ರಾಂಶ ವಿರಲಾರದು. ಆತನ ಬಳಿಗೆ ಹೋಗುವ. ಆತನಿಗೆ ಸಮಾಧಾನ ಹೇಳುವ." ಎಂದು ನುಡಿದಳು.

**ರಾಮನಾಯಕ:**—ಲಾವಣ್ಯವತೀ! ಭೀಮನಾಯಕನಬಳಿಗೆ ನಾನೇನೆಂದು ಹೋಗಲಿ? ಏನು ಸಮಾಧಾನ ಹೇಳಲಿ? ಆತನಿಗೆ ಮುಖವನ್ನು ಹೇಗೆ ತೋರಿಸಲಿ? ನಿಡುಗಲ್ಲಿಗೆ ಪಟ್ಟಾಭಿಷಿಕ್ತನನ್ನು ಮಾಡಿ, ನನ್ನ ಸರಿಯಧೊರೆಯಾಗಿ ಮಾಡಿಕೊಂಡೆನೆಂದು ಗರ್ವಪಡು ತ್ತಿದ್ದೆನು. ಇಂಥಾರಾಜ್ಯಗಳು ನೂರಾರಾದರೂ ಸರಿ ತೂಗಲಾರದಷ್ಟು ತ್ಯಾಗವನ್ನು ಆತನು ನನಗಾಗಿ ಮಾಡಿದ್ದು ತಿಳಿಯಲಿಲ್ಲ. ನನ್ನ ರಾಜ್ಯವನ್ನೂ, ಸಕಲ ಸಂಪತನ್ನೂ ಧಾರೆಯೆರೆದು ಆಜನ್ಮವೂ ಆತನ ಪಾದಸೇವೆ ಮಾಡಿದರೂ ಈ ಋಣವು ತೀರಿಸಲಾರೆನು. ಏನು ಮಾಡಲಿ? ಆತನ ದುಃಖವನ್ನು ಯಾವರೀತಿ ಹೋಗಲಾಡಿಸಲಿ?

**ಚಾರ:**— ಸ್ವಾಮಿಾ! ಭೀಮನಾಯಕನು ಈಗ ಎಲ್ಲಿರುವ ರೆಂದು ತಿಳಿದಿರುವಿರಿ?

**ರಾಮನಾಯಕ:**— ಎಲ್ಲಿರುವನು?

**ಚಾರ:**— ಈ ಲೋಕದಲ್ಲಿ ಇಲ್ಲ.

**ರಾಮನಾಯಕ:**— ಏನೆಂದಿ?

**ಚಾರ:**— ಭೀಮನಾಯಕನು ಈ ಲೋಕದಲ್ಲಿ ಇಲ್ಲ.

**ರಾಮನಾಯಕ:**— ನಿನ್ನ ಮಾತುಗಳು ನನಗೆ ಅರ್ಥವಾಗಲಿಲ್ಲ.

**ಚಾರ:**— ಆತನು ನರಸನಾಯಕನೊಡನೆ ಯುದ್ಧಮಾಡಿ ಸತ್ತುಹೋದನು.

**ರಾಮನಾಯಕ:**— ಯಾರು ಸತ್ತುಹೋದದ್ದು ?

**ಚಾರ:**— ಭೀಮನಾಯಕ.

**ರಾಮನಾಯಕ:**— ಯಾವ ಭೀಮನಾಯಕ ?

**ಚಾರ:**— ನಿಮ್ಮ ಮಂತ್ರಿಯಾದ ಭೀಮನಾಯಕ !

**ರಾಮನಾಯಕ:**— ಈ ಸುದ್ದಿ ನಿನಗೆ ಯಾರು ಹೇಳಿದರು ?

**ಚಾರ:**— ನಾವಿಬ್ಬರೂ ಕಣ್ಣಾರೆನೋಡಿದೆವು.

**ರಾಮನಾಯಕ:**— ನೀವುಯಾರು ?

**ಚಾರ:**— ಭೀಮನಾಯಕನ ಸೇವಕರು.

**ರಾಮನಾಯಕ:**— ನಿಮ್ಮನ್ನು ಇಲ್ಲಿಗೆ ಯಾರುಕಳುಹಿಸಿದರು?

**ಚಾರ:**— ನಾವೇಬಂದೆವು ?

**ರಾಮನಾಯಕ:**— ಏತಕ್ಕಾಗಿ ?

**ಚಾರ:**— ನಮ್ಮ ಸ್ವಾಮಿಯ ಮರಣವಾರ್ತೆಯು ನಿಮಗೆ ತಿಳುಹಿಸಲು.

**ರಾಮನಾಯಕ:**— ನಿಮ್ಮ ಸ್ವಾಮಿಯಾರು ? ನಿಜಹೇಳಿರಿ !

**ಚಾರ:**— ಭೀಮನಾಯಕನೆಂದು ಮೊದಲೇ ಬಿನ್ನಹಮಾಡಿಕೊಂಡೆವಲ್ಲವೇ ? ಪ್ರಭುವೇ ! ನಮ್ಮನ್ನು ಯಾತಕ್ಕೆ ಈ ರೀತಿ ಬಣ್ಣಿಸಿ ಬಣ್ಣಿಸಿ ಪ್ರಶ್ನೆಮಾಡುತ್ತಿರುವಿರಿ ?

**ರಾಮನಾಯಕ:**— ಎಲೋ ಚಾರರಿರಾ ! ನೀವು ರತ್ನಗಿರಿವಾಸಿಗಳೇ ? ಅಥವಾ ಕಳ್ಳನಾದ ನರಸನಾಯಕನ ಗುಪ್ತಚಾರರೇ ?

ನಿಜಹೇಳಿದರೆ ಮನ್ನಿಸಿಬಿಡುವೆನು. ಇಲ್ಲವಾದರೆ ನಿಮ್ಮನ್ನು ಚೂರು ಚೂರಾಗಿ ಮಾಡಿಬಿಡುವೆನು.

**ಚಾರ:**— ನಮ್ಮಲ್ಲಿ ಪ್ರಭುಗಳಿಗೆ ಅನುಮಾನವೇತಕ್ಕೆ?

**ರಾಮನಾಯಕ:**— ರಂಗನಾಯಕಿಯು ಸ್ವಹಸ್ತದಿಂದ ಶಿರ ಚ್ಛೇದನೆಮಾಡಿಕೊಂಡಳೆಂಬ ನಂಬಲಾಗದ ಸುದ್ದಿಯನ್ನು ಹೇಳಿದರೆ ಅನುಮಾನವಲ್ಲವೇ?

**ಚಾರ:**— ನಂಬಲಾಗದ ಸುದ್ದಿಯೇ ಸರಿ. ಆದರೂ ಅದು ನಿಜ. ನಿಡುಗಲ್ಲಿಗೆ ಯಾರನ್ನಾದರೂ ಕಳುಹಿಸಿ ತಿಳಿದುಕೊಳ್ಳಿರಿ.

**ರಾಮನಾಯಕ:**— ನಿಡುಗಲ್ಲಿಗೆ ಯಾರನ್ನಾದರೂ ಏಕೆ ಕಳುಹಿಸಬೇಕು? ಭೀಮನಾಯಕನು ಇಷ್ಟರಲ್ಲಿಯೇ ಬರುವನಷ್ಟೆ?

**ಚಾರ:**— ಭೀಮನಾಯಕನು ಎಲ್ಲಿಂದ ಬರುವನು? ಆತನು ಸತ್ತುಹೋಗಿರುವುದು ನಿಜ.

**ರಾಮನಾಯಕ:**— ಅದು ಸುಳ್ಳುಸುದ್ದಿ. ನಾನು ನಂಬುವುದಿಲ್ಲ. ನೀವು ರತ್ನಗಿರಿಯಭಟರು ಅಲ್ಲ. ನಿಮ್ಮ ಸಮಾಚಾರವನ್ನು ನಿಜವಾಗಿ ತಿಳುಹಿಸಿ ಪ್ರಾಣದಿಂದ ಹೊರಟುಹೋಗಿರಿ. ಇಲ್ಲವಾದರೆ ಚೂರು ಚೂರಾಗಿ ಕಡಿದು ಹಾಕದೆಬಿಡೆನು. ಭೀಮನಾಯಕನು ಯುದ್ಧದಲ್ಲಿ ಗೆದ್ದು ನರಸನಾಯಕನನ್ನು ಹಿಂದಕ್ಕೆ ತಳ್ಳಿ, ವಿಜಯಪತಾಕೆಯನ್ನೆತ್ತಿರುವೆನೆಂತಲೂ, ತಾನು ಅಚಿರಕಾಲದಲ್ಲಿಯೇ ಬರುವೆನೆಂತಲೂ ವರ್ತಮಾನಕಳುಹಿಸಿರುವನು. ಅದು ನೀವರಿಯದೇ ಯಾವುದೋ ಒಂದು ಕುತಂತ್ರವನ್ನು ನಡಿಸಲು ಬಂದಿರುವಿರಿ. ಅದು ಸಾಗುವುದಿಲ್ಲ.

**ಚಾರ:**— ಮಹಾಪ್ರಭೂ! ಆತುರಪಡಬೇಡಿರಿ. ನಾವು ತಮ್ಮಗಳ ಪಾದಸೇವಕರಾಗಲಿ, ನರಸನಾಯಕನ ಭೃತ್ಯರಲ್ಲ. ಭೀಮನಾಯಕನು ನಿನ್ನಿನರಾತ್ರಿ ಯುದ್ಧದಲ್ಲಿ ನರಸನಾಯಕನ ಬಲವನ್ನು ಕೊಂದು, ಅವನನ್ನು ಸೋಲಿಸಿ ಹಿಮ್ಮೆಟ್ಟಿಸಿದ್ದೇನೋ ನಿಜ. ತನ್ನ

ವಿಜಯವಾರ್ತೆಯನ್ನು ಪ್ರಭುಗಳಿಗೆ ಮುಂಚಿತವಾಗಿ ತಿಳುಹಿಸಬೇಕೆಂದು ಚಾರರನ್ನು ಕಳುಹಿಸಿದ್ದು ನಾನುಬಲ್ಲೆನು. ನರಸನಾಯಕನು ಸೋತುಹೋದನೆಂಬ ನಂಬುಗೆಯಿಂದ ಭೀಮನಾಯಕನು ನಿಡುಗಲ್ಲಿಗೆ ಪ್ರಯಾಣಮಾಡಿದ್ದು ಸಹಾ ಸತ್ಯವೇ. ನಾವಿಬ್ಬರೂ ಮುಂದೆ ದಾರಿ ತೋರಿಸುತ್ತಿದ್ದೆವು. ಅಶ್ವಾರೂಢನಾಗಿ ಆತನು ಆ ದಾರಿಯಲ್ಲಿ ಬರುತ್ತಿದ್ದನು. ಸೈನ್ಯವೆಲ್ಲವೂ ಹಿಂದೆ ಅರಣ್ಯಮಾರ್ಗದಲ್ಲಿ ಬೆಟ್ಟಗಳ ನಡುವೆ ಮೆಲ್ಲನೆ ಬರುತ್ತಿತ್ತು. ಆ ಸಮಯದಲ್ಲಿ ನರಸನಾಯಕನು ಮತ್ತೆ ಹತ್ತುಸಾವಿರ ಸೈನ್ಯವನ್ನು ಬರಮಾಡಿಕೊಂಡು ಹಿಂಭಾಗದಿಂದ ಪ್ರಮತ್ತರಾದ ಅವರ ಮೇಲೆಬಿದ್ದು ಒಬ್ಬರನ್ನಾದರೂಬಿಡದೆ ಕಡಿದು ಹಾಕಿದನು ಸೈನ್ಯವು ನಾಶವಾದಮೇಲೆ ಭೀಮನಾಯಕನು ಕಣ್ದೆರದನು. ಪ್ರಾಣವಿರುವವರೆಗೂ ಆ ಪಾಪಿಯನ್ನು ಮುಂದಕ್ಕೆ ಬಿಡಬಾರದೆಂದು ಬಯಲುಸೀಮೆಯಲ್ಲಿ ಕಾದುಕೊಂಡಿದ್ದನು. ಹನ್ನೆರಡುಸಾವಿರಸೈನ್ಯವು ಬಯಲೆಲ್ಲಾ ತುಂಬಿಕೊಂಡಿತು. ಆತನು ವೀರಾವೇಶದಿಂದ ಅಶ್ವಾರೂಢನಾಗಿ ಹಗೆಗಳಸೈನ್ಯವನ್ನು ಹೊಕ್ಕು ಸೈನಿಕರನ್ನು ಕೊಲ್ಲುತ್ತಿದ್ದನು. ಸ್ವಲ್ಪ ಹೊತ್ತಿನಮೇಲೆ ಕುದುರೆಯ ಕಾಲುಗಳನ್ನು ಯಾರೋ ಕಡಿಯಲು, ನೆಲಕ್ಕೆಬಿದ್ದನು. ಅನಂತರ ಆತನನ್ನು ಚೂರುಚೂರು ಮಾಡಿಬಿಟ್ಟರು. ಗುಪ್ತವೇಷದಿಂದ ನಾವು ನರಸನಾಯಕನ ದಂಡನ್ನು ಹೊಕ್ಕು, ನಮ್ಮ ಒಡೆಯ ಸತ್ತದ್ದು ನಿಜವೆಂದು ತಿಳಿದುಕೊಂಡು ಬಂದಿರುವೆವು. ಅದರಲ್ಲಿ ಅನುಮಾನವಿಲ್ಲ. ನರಸನಾಯಕನು ಯುದ್ಧದ ಶ್ರಮೆಯನ್ನು ತೀರಿಸಿಕೊಂಡು, ನಿಡುಗಲ್ಲಿಗೆಬರಲು ನಿಶ್ಚಯಿಸಿಕೊಂಡಿದ್ದಾನೆ. ನೀವು ಸಮರಸನ್ನಾಹರಾಗಿ ಇರಬೇಕು. ನಮ್ಮಮೇಲೆ ಇನ್ನೂ ನಿಮಗೆ ಅಪನಂಬಿಗೆಯಿದ್ದರೆ ನಿಮ್ಮಚಿತ್ತಕ್ಕೆಬಂದ ನಿರ್ಬಂಧರದಲ್ಲಿ ಇಡಬಹುದು. ಪ್ರಾಣದ ಮೇಲಿನ ಆಸೆಯೂ ನಮಗೆ ಅಷ್ಟಷ್ಟೆ. ಬಂಧುಗಳನ್ನೂ, ಸ್ನೇಹಿತರನ್ನೂ, ಸಾವಿರಾರು ಜನರನ್ನು ಕಳೆದುಕೊಂಡು ನಾವು ಬದುಕಿ ಮಾಡುವದೇನೂ ಇಲ್ಲ. ನೀವು ಮಾತ್ರ ಮೈಮರೆದು ಕೂಡಬೇಡಿರಿ. ನರಸನಾಯಕನಿಗೆ ತುತ್ತಾಗಬೇಡಿರಿ.

ರಾಮನಾಯಕನ ಅನುಮಾನವು ತೀರಿತು. ಚಾರರ ಪ್ರತಿಯೊಂದು ಮಾತಿನಲ್ಲಿಯೂ ನಂಬುಗೆ ಹುಟ್ಟಿತು. ಸಂಕಟವು ಹೆಚ್ಚಾಯಿತು. ಏನೊಂದು ತೋರದೆ ಚೈತನ್ಯಹೀನನಂತೆ ಸುಮ್ಮನಿದ್ದನು. ಆತನು ಮತ್ತೇನು ಮಾಡಬಲ್ಲನು? ಭೀಮನಾಯಕನು ಹೋದದ್ದು ತನ್ನ ಬಲಭುಜವು ಹೋದಂತಾಯಿತು. ಆತನು ತನಗೋಸುಗ ಪ್ರಾಣವನ್ನೇ ಅರ್ಪಿಸಿದ್ದನು. ತನ್ನ ದೆಸೆಯಿಂದಲೇ ಆತನ ಧರ್ಮಪತ್ನಿಯು ಸಹಾ ಆತ್ಮಹತ್ಯಮಾಡಿಕೊಂಡಿದ್ದಳು. ಆ ದಂಪತಿಗಳನ್ನು ನೆನೆನೆನೆದು ರಾಮನಾಯಕನು ದುಃಖಿಸುವದರಲ್ಲಿ ವಿಶೇಷವೇನಿದೆ? ಆತನಿಗೆ ಸಮಾಧಾನ ಹೇಳುವರು ಯಾರು? ಆ ಭಾರವು ತನ್ನಮೇಲೆ ಬಿದ್ದಿದೆಎಂದು ಕುಶಲಮತಿಯಾದ ಲಾವಣ್ಯವತಿಯು ಗ್ರಹಿಸಿದಳು. ಆತನನ್ನು ಸಮೀಪಿಸಿ, “ನಾಥಾ! ನೀವೇ ಈ ರೀತಿಯಾದರೆ ಧೈರ್ಯಹೇಳುವವರು ಯಾರು? ನೀವೆಷ್ಟು ಹಲುಬಿದರೂ ರಂಗನಾಯಕಿಯಾಗಲಿ, ಭೀಮನಾಯಕನಾಗಲಿ, ಬದುಕಿ ಬರಲಾರರು. ನೀವು ಸಮಾಧಾನಮಾಡಿಕೋಬೇಕು” ಎಂದು ಅನುನಯಿಸಲು, ರಾಮನಾಯಕನು “ಅಯ್ಯೋ! ಲಾವಣ್ಯವತೀ! ನನಗೆ ಇನ್ನೆಲ್ಲಿಯ ಸಮಾಧಾನ? ಎಲ್ಲಿಯ ಸುಖಸಂತೋಷ? ಬಾಲ್ಯದಿಂದಲೂ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸಿದ ಸಖನು. ಹಗಲಿರಳು ಎಡೆಬಿಡದೆ ಕಾಪಾಡಿದ ಸಚಿವನು. ಅರಿಭಯಂಕರನಾಗಿ ರತ್ನಗಿರಿಯ ಕಡೆಯೂವ ಯಾವನು ಕಣ್ಣೆತ್ತಿನೋಡದಂತೆ ಮೆರೆಯುತ್ತಿದ್ದ ಸೇನಾಪತಿಯು. ಸತಿಸಿರೋಮಣಿಯಾದ ರಂಗನಾಯಕಿಯ ಸಾವನ್ನು ತೃಣಪ್ರಾಯವಾಗಿ ಗಣಿಸಿ, ನನ್ನ ವಿವಾಹಕ್ಕೆ ವಿಘ್ನಬರಲೀಸಬಾರದೆಂದು ಹೋರಾಡಿ ಮಡಿದ ಗುಣನಿಧಿಯು. ಅಂಥಾ ಶೂರನನ್ನು, ಆಪ್ತನನ್ನು, ಬಂಧುವನ್ನು, ಸಚಿವನನ್ನು ಕಳೆದುಕೊಂಡು ನಾನು ಬದುಕುವೆನೆಂಬುವದು ಎಲ್ಲಿಯ ಸುದ್ದಿ? ನಿಡುಗಲ್ಲು ರಾಜ್ಯಕ್ಕೆ ಪಟ್ಟವನ್ನು ಕಟ್ಟಿ ಋಣವಿಮುಕ್ತನಾದೆನೆಂಬ ಹಿಗ್ಗಿನಿಂದಿದ್ದೆನಾಗಲಿ ಆತನು ಮೃತ್ಯುವಿಗೆ ತುತ್ತಾದದ್ದು ನಾನರಿಯೆ. ನಾನು ಮಾಡಿದ ಯೋಚನೆಯೊಂದಾಯಿತು, ಭಗವಂತನ ಕಟ್ಟಳೆಯು ಬೇರೆಯಿದ್ದಿತು” ಎಂದು ಬಿಕ್ಕಿಬಿಕ್ಕಿ ಅಳುತ್ತಿದ್ದನು.

ಅಷ್ಟರಲ್ಲಿಯೇ ಸಿಡುಗಲ್ಲು ಭಟರಲ್ಲೊಬ್ಬನು ನರಸನಾಯಕನ ದಂಡು ಒಂದೆರಡು ಮೈಲಿದೂರದಲ್ಲಿ ಬರುತ್ತಿರುವದನ್ನು ನೋಡಿ, ಅದು ಭೀಮನಾಯಕನ ಪರಿವಾರವೆಂಬ ನಂಬಿಕೆಯಿಂದ, ರಾಮನಾಯಕನ ಬಳಿಗೆ ಬಂದು ತಿಳುಹಿಸಿದನು. ಪ್ರಜಾಜನರೆಲ್ಲರೂ ಅದೇ ನಂಬಿಗೆಯಿಂದ ಭೀಮನಾಯಕನನ್ನು ಇದಿರುಗೊಂಡು ಕರತರಬೇಕೆಂಬ ಪ್ರಯತ್ನದಲ್ಲಿದ್ದರು. ಅದನ್ನು ಕೇಳಿ ರಾಮನಾಯಕನು ಎಲೈ ಚಾರನೇ! ನನ್ನ ಅಪ್ಪನು, ನಿಮ್ಮ ಪ್ರಭುವು ಆದ ಭೀಮನಾಯಕನು ಈ ಲೋಕದಲ್ಲಿ ಇಲ್ಲ. ಆತನು ನರಸನಾಯಕನೊಡನೆ ಯುದ್ಧ ಮಾಡಿ ಸತ್ತು ಸ್ವರ್ಗಕ್ಕೆ ಹೋಗಿರುವನು ಈಗ ಬರುತ್ತಿರುವಸೈನ್ಯವು ಹಗೆಯನಾದ ನರಸನಾಯಕನದು. ನೀನೀಗಲೇ ಹೋಗಿ ಈ ವೃತ್ತಾಂತವನ್ನು ಸರ್ವರಿಗೂ ತಿಳುಹಿಸು. ಅವನನ್ನು ಹಿಂದಕ್ಕೆ ಅಟ್ಟಲು ಸಿದ್ಧರಾಗಬೇಕೆಂದು ಹೇಳು. ನಾಳಿನದಿನ ಸಂಗ್ರಾಮವು ತಪ್ಪಿದ್ದಲ್ಲ. ಮೋಸಗಾರನಾದ ನರಸನಾಯಕನು ನಾವೆಲ್ಲರೂ ಸಿದ್ಧಹೋದನಂತರ ಮೇಲೆ ಬೀಳಬಹುದು. ನಾವೆಲ್ಲರೂ ಎಚ್ಚತ್ತು ಕಾರ್ಯದೀಕ್ಷೆಯಿಂದ ಹೊಡೆದಾಡಬೇಕೆಂದು ತಿಳುಹಿಸು" ಎಂದು ಹೇಳಿ ಕಳುಹಿಸಿದನು. ಚಾರನು ಅದೇರೀತಿ ಸರ್ವರಿಗೂ ತಿಳುಹಿಸಿದನು.

ಈ ಸುದ್ದಿಯು ಕೋಟೆಯಲ್ಲಿ ಎಲ್ಲರಿಗೂ ತಿಳಿದಿತು. ಎಲ್ಲಿಯ ಆಟಗಳು ಅಲ್ಲಿಯೇ ನಿಂತು ಹೋದವು. ಎಲ್ಲಿಯ ವಾದ್ಯಗಳು ಅಲ್ಲಿಯೇ ಸುಮ್ಮನಾದವು ಎಲ್ಲಿಯಗಾಯಕರು ಅಲ್ಲಿಯೇ ಮುಕ್ತಾಯ ಮಾಡಿದರು. ತಮ್ಮ ಹಾಳು ಕೋಟೆಗೆ ಜೀವಕಳೆ ಬಂತೆಂದು, ರಾಜನಿಲ್ಲದ ತಮಗೆ ರಾಜನು ಲಭಿಸಿದನೆಂದು, ಹಿಂದಿನ ಕಷ್ಟಗಳನ್ನು ಮರೆತು, ಸಂತೋಷದಲ್ಲಿ ತನ್ಮಯರಾಗಿದ್ದ ಪ್ರಜೆಗಳ ಪಾಲಿಗೆ ಈ ಸುದ್ದಿಯು ಸಿಡುಲು ಬಿದ್ದಂತಾಯಿತು. ಅವರ ಉತ್ಸಾಹವು ನಾಶವಾಯಿತು. ಭೀತಿಯು ಮನವನ್ನಾವರಿಸಿಕೊಂಡಿತು. ಬಾಯಿ ಎತ್ತದೆ ರಾಮನಾಯಕನ ಅಪ್ಪಣೆಯಂತೆ ನಡೆದುಕೊಳ್ಳುವುದೇ ಲೇಸೆಂದು ತಿಳಿದು ಯುದ್ಧಕ್ಕೆ ತಯಾರಾಗುತ್ತಿದ್ದರು.

ರಾಮನಾಯಕನು ಮುಂದಿನ ಕಾರ್ಯಾಲೋಚನೆಯಲ್ಲಿದ್ದನು. ನರಸನಾಯಕನ ಕಡೆಯಿಂದ ಇಬ್ಬರು ಭಟರುಬಂದು ಆತನ ದರ್ಶನ ವಾಗಬೇಕೆಂದು ಬೇಡಿದರು. ಆತನು ಅವರನ್ನು ತನ್ನಲ್ಲಿಗೆ ಬರಮಾಡಿ ಕೊಳ್ಳಲು ಅನುಮಾನಿಸಿದನು. ನರಸನಾಯಕನೊಡನೆ ರಾಯಭಾರವು ಆತನಿಗೆ ಕಹಿಯಾಗಿ ಕಾಣಿಸಿತು- ಭೀಮನಾಯಕನ ಆತ್ಮಕ್ಕೆ ದ್ರೋಹಮಾಡಿದಂತಾಗುವುದೆಂದು ಭಾವಿಸಿದನು. ಆದರೂ, ಯಾವ ಹುತ್ತಿನಲ್ಲಿ ಯಾವ ಹಾವಿರುವುದೋ ಪರೀಕ್ಷಿಸಿಯೇ ಬಿಡೋಣವೆಂದು ಕೊಂಡು ಅವರನ್ನು ಬರಮಾಡಿಕೊಂಡನು. ಚಾರರು ಬಂದು ಆತ ನಿಗೆ ವಂದಿಸಿ ಪತ್ರವನ್ನೊಂದನ್ನು ಕೊಟ್ಟರು. ಆತನದನ್ನು ಈ ರೀತಿ ಓದಿಕೊಂಡನು.

“ ಎಲೌ, ರಾಮನಾಯಕಾ ! ನೀನು ಇನ್ನೂ ಹಸುಕೂಸು. ಪ್ರಪಂಚದ ಜ್ಞಾನವು ನಿನಗಿಲ್ಲ. ಬಲಾಬಲಗಳನ್ನೆಣಿಸದೆ, ಕುಮಂತ್ರಿ ಗಳ ಮಾತುಗಳಿಗೆ ಕಿವಿಗೊಟ್ಟು, ನನ್ನ ಮೇಲೆ ಹಗೆಯನ್ನು ಬೆಳಸಿ ಕೂತೆ. ಅದರಿಂದಾಗುವ ಲಾಭನಷ್ಟಗಳನ್ನು, ಕಷ್ಟ ಸುಖಗಳನ್ನು ಎಣಿಸದೇಹೋದೆ. ನಾನು ಮೋಹಿಸಿದ ಹೆಣ್ಣಿನ ಗೋಜು ನಿನಗೇ ತಕ್ಕೆ ? ನಿನ್ನ ಹನ್ನೆರಡುಸಾವಿರ ಸೈನ್ಯದ ಗತಿ ಏನಾಯಿತೋ ತಿಳಿ. ಭೀಮನಾಯಕನು ನನ್ನ ಹೊಡೆತದಿಂದ ನಾಮಾವಶಿಷ್ಟನಾದದ್ದು ನೋಡು. ಇನ್ನು ನೀನು ಮಾತ್ರ ಎಷ್ಟರವನು ? ಸೈನ್ಯಹೀನನಾದ ನೀನು ಈಗ ಏನು ಮಾಡಬಲ್ಲೆ ? ಆದರೂ ನಿನ್ನ ಮೇಲೆ ಕೈಮಾಡಲು ಮನಸ್ಸು ಬಾರದು. ಲಾವಣ್ಯವತಿಯನ್ನು ಒಪ್ಪಿಸಿ, ಶರಣಾಗತ ನಾದರೆ, ಈಗಲೂ ನಿನ್ನನ್ನು ಕ್ಷಮಿಸಿಬಿಡುವೆನು. ರತ್ನಗಿರಿಯನ್ನೇ ಅಲ್ಲ ನಿಡುಗಲ್ಲನ್ನು ಸಹಾ ನಿನಗೆ ಬಿಟ್ಟುಕೊಡುವೆನು. ನನ್ನ ಮುದ್ದು ಮಗಳು ಗಂಗಾಬೆಯನ್ನು ಕೊಟ್ಟು ಮದುವೆಮಾಡುವೆನು. ನೀನು ಸರ್ವವಿಧದಿಂದಲೂ ಸುಖಿಯಾಗುವೆ. ಇಲ್ಲವಾದರೆ ಬಲವಂತದಿಂದ ಲಾವಣ್ಯವತಿಯನ್ನು ಹಿಡಿದೊಯ್ಯುವೆನು. ಅಡ್ಡಬಂದರೆ ನಿನ್ನನ್ನು ಯಮಪುರಿಗೆ ಕಳುಹಿಸುವುದೇ ನಿಜ. ಆತುರಪಡದೆ, ಅಹಂಕಾರ

ವನ್ನು ಬಿಟ್ಟು, ಕಣ್ದೆರೆದು ಸರ್ವವನ್ನೂ ಸ್ವಬುದ್ಧಿಯಿಂದ ವಿತರ್ಕಿಸಿ ನನ್ನ ಮಾತು ಕೇಳು. ಕೆಡಬೇಡ. ತಡಮಾಡದೆ ಲಾವಣ್ಯವತಿಯನ್ನು ಕಳುಹಿಸಿಕೊಡು."

ಈ ರೀತಿ ಆತನು ಪಠಿಸುತ್ತಿರಲು, ಲಾವಣ್ಯವತಿಯು ಕೇಳುತ್ತಲೇ ಇದ್ದಳು. ನರಸನಾಯಕನ ವಾಕ್ಯಗಳೊಂದೆರಡು ನಿಜವೆಂದು ಒಪ್ಪಿಕೋಬೇಕಾಗಿತ್ತು. ಆತನು ಪ್ರಬಲ ಸೈನ್ಯಯುತನಾಗಿದ್ದನು. ಯುದ್ಧಕ್ಕೆ ತಯಾರಾಗಿಯೇ ಬಂದಿದ್ದನು. ತಮಗಾದರೋ ಸೈನ್ಯವು ಕೊಂಚ. ಯುದ್ಧದ ಹಂಬಲು ಯಾರಿಗೂ ಇರಲಿಲ್ಲ. ನರಸನಾಯಕನು ರತ್ನಗಿರಿಯ ಹನ್ನೆರಡು ಸಾವಿರ ಬಲವನ್ನು ಕೊಂದು ಭೀಮನಾಯಕನನ್ನು ಹತಮಾಡಿ ವಿಜಯೋತ್ಸಾಹಭರಿತನಾಗಿದ್ದನು. ರಾಮನಾಯಕನು ಅವರೆಲ್ಲರನ್ನೂ ಕಳೆದುಕೊಂಡು ಮೇರೆಗಾಣದ ದುಃಖಸಾಗರದಲ್ಲಿ ಮುಳುಗಿ ಹೋಗಿದ್ದನು. ರಂಗನಾಯಕಿಯ ಅದ್ವಿತೀಯವಾದ ಆತ್ಮಾಹುತಿಗೆ ಕೊರಗುತ್ತಿದ್ದನು. ಮುಂದೆ ಏನು ಮಾಡುವನೋ ಎಂದು ಯೋಚಿಸುತ್ತಿದ್ದಳು.

ರಾಮನಾಯಕನು ಆ ಓಲೆಯನ್ನು ಮುಗಿಸಿ ಪಟಪಟನೆ ಪಲ್ಗಡಿದು "ಎಲೋ ಚಾರರಿರಾ, ರಾಯಬಾರಿಗಳನ್ನು ಕೊಲ್ಲುವುದು ರಾಜನೀತಿಯಲ್ಲ ಇಲ್ಲವಾದರೆ, ಇಂಥಾ ಲೇಖಿಯನ್ನು ತಂದುದಕ್ಕೆ ತಕ್ಕ ಶಿಕ್ಷೆಯನ್ನು ನಿಮಗೆ ಮಾಡಿ ಬಿಡುತ್ತಿದ್ದೆನು. ಆ ಗುಲಾಮನಿಗೆ ನಾನು ಪ್ರತ್ಯುತ್ತರವನ್ನು ಬರೆಯುವವನಲ್ಲ. ನಾಳಿನ ದಿನದ ಸಂಗ್ರಾಮದಲ್ಲಿ ನನ್ನ ಕೋಪಾಗ್ನಿಗೆ ಅವನನ್ನು ಆಹುತಿ ಕೊಡುವೆನೆಂದು ಹೇಳಿರಿ," ಎಂದನು. ಕರಾಳ ಮೂರ್ತಿಯಾಗಿದ್ದ ಆತನ ಎದುರಿಗೆ ನಿಲ್ಲಲು ಧೈರ್ಯಸಾಲದೆ ಆ ಚಾರರು ಹೊರಟು ಹೋದರು. ಅಲ್ಲಿಂದ ಪ್ರಾಣದೊಡನೆ ಹೊರಬಿದ್ದರೆ ಮತ್ತೊಮ್ಮೆ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದಂತೆ ಎಂದು ಭಾವಿಸಿದರು. ತಮ್ಮರಾಜನಲ್ಲಿಗೆ ಹೋಗಿ ಯಾವ ದ್ವೃತಾಂತವನ್ನು ತಿಳುಹಿಸಿದರು. ಅವನು ಬದಲು ಮಾತನಾಡಲಿಲ್ಲ. ತನ್ನಲ್ಲಿ ತಾನು ಏನೇನೋ ಯೋಚಿಸಿಕೊಳ್ಳುತ್ತಿದ್ದನು.

# ೧೨ನೆಯ ಪ್ರಕರಣ.

ಆ ರಾತ್ರಿ ನಿಡುಗಲ್ಲು ಕೋಟೆಯಲ್ಲಿ ಎಲ್ಲರೂಎಚ್ಚತ್ತಿದ್ದರು. ಪೆನುಗೊಂಡೆಯ ಸೈನ್ಯವು ತಮ್ಮ ಮೇಲೆ ಬೀಳವುದೇನೋ ಎಂಬ ಭಯವು ಸಂಪೂರ್ಣವಾಗಿತ್ತು ಏನು ಕಾರಣದಿಂದಲೋ ನರಸ ನಾಯಕನು ಆ ರಾತ್ರಿ ಅವರನ್ನು ಕೆಣಕಲಿಲ್ಲ. ಯುದ್ಧ ಧರ್ಮಕ್ಕೆ ಕಟ್ಟುಬಿದ್ದಲ್ಲ. ಅಂಥಾ ಧರ್ಮಸೂತ್ರಗಳನ್ನು ಅವನು ಅರಿತವನೇ ಅಲ್ಲ. ಸುಮ್ಮನಿದ್ದುದಕ್ಕೆ ಕಾರಣವು ಅವನಿಗೇಗೊತ್ತು. ಕೆಲವು ಮಂದಿಯನ್ನು ಪಹರಾಕ್ಕೆ ನಿಯಾಮಕಮಾಡಿ ಅವನೂ ಅವನ ಸೈನ್ಯವೂ ಸುಖನಿದ್ರೆಯನ್ನು ಮಾಡಿದರು.

ರಾಮನಾಯಕನಿಗೆ ಆ ರಾತ್ರಿ ನಿದ್ರೆಯೇ ಇಲ್ಲ. ಸೂರ್ಯೋದಯವು ಯಾವಾಗಲಾದೀತು, ಮದೋನ್ಮತ್ತನಾದ ನರಸನಾಯಕನನ್ನು ಯಾವಾಗ ತನ್ನ ನೇಡು ತೀರುವಂತೆ ಕಡಿದು ಬಿಸುಟಲು ಅವಕಾಶ ಸಿಕ್ಕೀತು ಎಂದು, ಕಣ್ಣಿಗೆ ನಿದ್ರೆಯಿಲ್ಲದೆ, ಮನಸ್ಸಿಗೆ ಸಮಾಧಾನವಿಲ್ಲದೆ, ಸಿಟ್ಟಿಗೆ ಮೇರೆಯಿಲ್ಲದೆ, ರಾತ್ರಿಯನ್ನು ಕಳೆದನು ಸೂರ್ಯೋದಯಾನಂತರ ಸೈನ್ಯವನ್ನು ಸಿದ್ಧಗೊಳಿಸಿಕೊಂಡು ಕೋಟೆಯಿಂದ ಹೊರಹೊರಟನು. ನರಸನಾಯಕನಾದರೋ ಎರಡು ಮೈಲಿಗಳ ದೂರದಲ್ಲಿ ಇದ್ದನು. ಕೋಟೆಯ ಸಮೀಪಕ್ಕಾದರೂ ಬಂದಿರಲಿಲ್ಲ. ರಾಮನಾಯಕನು ತಾನೇ ಮುಂದರಿದು ಹೋದನು. ಆತನು ರೋಷದಿಂದ ಆತುರಪಡುತ್ತಿದ್ದನು. ವೈರಿಗಳ ಮೇಲೆ ಬಿದ್ದನು. ಸೈನ್ಯವು ಸಹಾ ಆತನನ್ನು ಅನುಸರಿಸಿ ಪೆನುಗೊಂಡೆಯವರ ಮೇಲೆ ಬಿತ್ತು.

ನರಸನಾಯಕನು ಎರಡು ಸಾವಿರ ಸೈನ್ಯದೊಡನೆ ಕಾದಿದ್ದನು. ರಾಮನಾಯಕನು ತಾನಾಗಿ ತಾನು ಕೈಮಾಡುವವರೆಗೂ ಸುಮ್ಮನಿದ್ದನು. ಆತನ ಹೊಡತಕ್ಕೆ ನಿಲ್ಲಲಾರದೆ ಅವನು ಒಂದೊಂದು ಹೆಜ್ಜೆ ಹಿಂದಕ್ಕೆ ಹಾಕುತ್ತಿದ್ದನು. ಇದು ನಿಡುಗಲ್ಲಿನವರಿಗೆ ಧೈರ್ಯೋತ್ಸಾಹಗಳಿಗೆ ಕಾರಣವಾಯಿತು. ಅವರ ಪರಾಕ್ರಮವು ಹೆಚ್ಚಿತು.

ಪೆನುಗೊಂಡೆಯವರು ತಮ್ಮ ರಾಜನೊಡನೆ ಪಲಾಯನಮಾಡಲು ಪ್ರಾರಂಭಿಸಿದರು. ರಾಮನಾಯಕನು ಅವರನ್ನು ಹಿಂಬಾಲಿಸಿದನು. ಎರಡು ಗುಡ್ಡಗಳ ನಡುವೆ ಇರುಕಾದ ಮಾರ್ಗವಾಗಿ ಅವರು ತಪ್ಪಿಸಿಕೊಂಡು ಹೋಗಬೇಕಾಗಿತ್ತು. ಆ ಸ್ಥಳದಲ್ಲಿ ಶತ್ರುಗಳನ್ನು ನಿರ್ನಾಮಗೊಳಿಸಬಹುದೆಂಬ ಭರವಸೆಯಿಂದ ರಾಮನಾಯನು ಅವರ ಬೆನ್ನಟ್ಟಿದನು.

ಆದರೆ, ಅದೇನು ಸೋಜಿಗವೋ! ತಾನೆಲ್ಲಿ ಅವರನ್ನು ಕೊಲ್ಲುವೆನೆಂಬ ಭರವಸೆಯಿಂದಿದ್ದನೋ, ಅಲ್ಲಿಗೆ ಸೇರಿದೊಡನೆಯೇ ನರಸನಾಯಕನೂ ಅವನ ಸೈನ್ಯವೂ ಎದುರು ತಿರುಗಿ ರಾಮನಾಯಕನ ಮೇಲೆ ಬಿದ್ದರು. ರಾಮನಾಯಕನು ಬೆರಗಾದನು. ಆತಗೆ ಅದರ ಅರ್ಥವು ತಿಳಿಯದೆ ಹೋಯಿತು. ಕಾರಣವು ಗ್ರಹಿಸದೆ ಹೋದನು. ಧರ್ಮಯುದ್ಧದ ಮಾರ್ಗಾವಲಂಬಕನಾದ ರಾಮನಾಯಕನಿಗೆ, ಕುತ್ಸಿತ ಮತಿಯಾದ ನರಸನಾಯಕನ ಮೋಸಯುದ್ಧದ ಕಿಟುಕು ತಿಳಿಯುವದು ಹೇಗೆ? ಎದುರುಬಿದ್ದ ಪೆನುಗೊಂಡೆಯವರ ಮೇಲೆ ವಿಜೃಂಭಿಸಿದನು ದಂಡನ್ನು ಕಡಿಕಡಿದು ಕೆಡಹುತ್ತಿದ್ದನು. ಹಿಂಭಾಗದಿಂದಲೂ, ಎಡಬಲಗಳಿಂದಲೂ, ಮೋಸದಿಂದ ತನ್ನವರಮೇಲೆ ಬಿದ್ದ ಪೆನುಗೊಂಡೆಯ ಆರುಸಾವಿರ ಸೈನ್ಯವನ್ನು ಆತನು ನೋಡಲಿಲ್ಲ. ಇದೆಲ್ಲ ನರಸನಾಯಕನ ಕುತಂತ್ರವು! ಮುಖಾಮುಖಿ ಹೊಡೆದಾಡಿ ಅವನು ಯಾವ ಯುದ್ಧದಲ್ಲಿಯೂ ಗೆದ್ದಿರಲಿಲ್ಲ. ಅವನ ಜನ್ಮವೆಲ್ಲವೂ ಮೋಸದಿಂದ ತುಂಬಿತುಳುಕುತ್ತಿತ್ತು. ಆಗಲೂ ಮೋಸದ ಮಾರ್ಗವನ್ನೇ ಹುಡುಕಿದ್ದನು. ತನ್ನ ಸೈನ್ಯವನ್ನು ನಾಲ್ಕುಪಂಗಡವಾಗಿ ಮಾಡಿ, ಒಂದು ಭಾಗವನ್ನು ತನ್ನಲ್ಲಿಟ್ಟುಕೊಂಡು ಮಿಕ್ಕ ಮೂರು ಭಾಗಗಳನ್ನು ಎಡಬಲದಲ್ಲಿದ್ದ ಗುಡ್ಡಗಳಲ್ಲಿ ಅಡಗಿಸಿದ್ದನು. ಸಂಕೇತ ಸ್ಥಾನಕ್ಕೆ ರಾಮನಾಯಕನನ್ನು ತಾನು ಸೋತವನಂತೆ ನಟನೆ ಮಾಡುತ್ತಾ ಎಳೆದು ತಂದಕೂಡಲೇ, ಹಿಂಭಾಗದಿಂದ ಆತನ ಮೇಲೆ ಬೀಳಬೇಕೆಂದು ಏರ್ಪಾಟು ಮಾಡಿದ್ದನು. ಕೊನೆಗೆ ರಾಮನಾಯಕನನ್ನು ನಡುವೆ ಹಾಕಿಕೊಂಡನು.

ನಾಲ್ಕು ಕಡೆಯಲ್ಲಿಯೂ ಅವನ ಸೈನ್ಯವಿತ್ತು. ರಾಮನಾಯಕನಿಗೆ ಅದು ಗೊತ್ತಿರಲಿಲ್ಲ. ಯುದ್ಧಮಾಡುವವರಂತೆ ನಟಿಸುತ್ತಾ, ಆತನ ಕೈಗೆ ಸಿಕ್ಕೀಸಿಗದೆ ನರಸನಾಯಕನೂ ಅವನ ಜತೆಯಲ್ಲಿದ್ದ ಎರಡು ಸಹಸ್ರ ಸೈನಿಕರೂ ಹಿಂದಕ್ಕೆ ಸಾಗುತ್ತಿದ್ದರು. ಅವರ ಮೇಲೆ ಗಮನಕೊಟ್ಟು ರಾಮನಾಯಕನು ಮುಂದರಿದು ಹೋಗುತ್ತಿದ್ದನು. ಹಿಂಭಾಗದಲ್ಲಿ ಹಗೆಗಳು ತನ್ನ ಸೈನ್ಯವನ್ನು ಸೂರೆಗೊಳ್ಳುತ್ತಿದ್ದುದು ಆತನಿಗೆ ತಿಳಿಯಲಿಲ್ಲ. ಒಂದೆರಡು ತಾಸಿನಲ್ಲಿ ನಿಡುಗಲ್ಲಿನವರು ನಿಶ್ಶೇಷರಾದರು.

ರಾಮನಾಯಕನು ಆಗ ಕಣ್ದೆರೆದು ನೋಡಿದನು. ಆದರೆ, ಏನು ತಾನೆ ಮಾಡಬಲ್ಲನು? ನಾಲ್ಕು ಕಡೆಯಲ್ಲಿಯೂ ಶತ್ರುಸೈನ್ಯವು ಮುಸುಕಿತ್ತು ತಾನು ಮಧ್ಯೆ ಸಿಕ್ಕಿ ಹೋಗಿದ್ದನು. ತನ್ನವರೆಂಬುವರು ಒಬ್ಬರಾದರೂ ಇರಲಿಲ್ಲ. ರಂಗನಾಯಕಿಯ ಆತ್ಮಾಹುತಿ, ಭೀಮನಾಯಕನ ಮರಣ, ರತ್ನಗಿರಿಯ ಸೈನ್ಯದ ನಾಶ, ನಿಡುಗಲ್ಲಿನವರ ಕೊಲೆ, ಇವೆಲ್ಲವೂ ಆತನ ಮನಸ್ಸಿಗೆ ತಟ್ಟಿದವು. ಅದೇನೋ ಪಾಳೆಯಗಾರರಿಗೆ ಅಂತ್ಯದಶೆ ಒದಗಿತೆಂದು ನಂಬಬೇಕಾಗಿದ್ದಿತು. ಅಲ್ಲಿ ನಿಂತರೆ ಬದುಕುವುದು ಸುಳ್ಳು. ಹಗೆಗಳಿಗೆ ಬೆನ್ನುಕೊಟ್ಟು ಓಡಿ ಹೋಗುವುದು ಹೇಡಿತನ. ಪಾಳೆಯಗಾರರ ವಂಶವು ಹಾಳಾದರೂ ಕೊರತೆಯಿರಲಾರದಾಗಲಿ, ಅವರ ಪರಾಕ್ರಮವು ತನ್ನ ಕಾಲಕ್ಕೆ ಕುಗ್ಗಿತೆಂಬ ಅಪಯಶಸ್ಸು ಗಳಿಸಬಾರದೆಂದು ಆ ಅಭಿಮಾನ ನಿಧಿಯು ಮನಸು ಘಟ್ಟಿಮಾಡಿಕೊಂಡನು! "ಅಂಥಾ ಬದುಕು ಬದುಕಿದರೂ ಫಲವಿಲ್ಲ. ಯುದ್ಧರಂಗದಲ್ಲಿಯೇ ಹೋರಾಡಿ ಸಾಯುವ" ಎಂದು ನಿಶ್ಚಯಿಸಿಕೊಂಡನು.

ತನ್ನ ಭಾಗ್ಯದ ಸಾರವಾದ ಲಾವಣ್ಯವತಿಯನ್ನು ಬಿಟ್ಟು ಸಾಯಲು ಮನಸು ಬಾರಲಿಲ್ಲವಾಗಲಿ, ಸೋತುಹೋಗಿ ಆಕೆಗೆ ಮುಖವನ್ನು ತೋರಿಸಲು ನಾಚಿದನು. ಪ್ರಪಂಚದಮೇಲಿನ ಆಶೆಯನ್ನು ಬಿಟ್ಟುಕೊಟ್ಟನು. ಕುದುರೆಯ ಮೇಲಿನಿಂದಲೇ ನಾಲ್ಕು

ಭಾಗದ ದಂಡನ್ನೂ ನಿಸಿತವಾದ ತನ್ನ ಕರವಾಲಕ್ಕೆ ಆಹುತಿಕೊಡುತ್ತಿದ್ದನು. ತಾನು ರಣದಲ್ಲಿ ಮಡಿಯುವದಕ್ಕೆ ಮುಂಚೆ, ನರಸನಾಯಕನನ್ನು ಯಮಪುರಿಗೆ ಕಳುಹಿಸಬೇಕೆಂದು ದಿಕ್ಕುದಿಕ್ಕುಗಳು ಹುಡುಕಿದನು. ಅವನು ಕಾಣಿಸಲಿಲ್ಲ. ಆ ಹೇಡಿಗೆ ಇಂಥಾ ವೀರರ ಮುಂದೆ ನಿಲ್ಲಲು ಸಾಹಸವೆಲ್ಲಿಂದ ಬರಬೇಕು? ಅವರ ಕಣ್ಣಿಗೆ ಬೀಳಲು ಧೈರ್ಯವೆಲ್ಲಿದೆ.!

ಭೀಮನಾಯಕನೊಡನೆ ಮಾಡಿದ ಯುದ್ಧವನ್ನೇ ಅವನು ರಾಮನಾಯಕನೊಡನೆ ಮಾಡಿದ್ದು. ಸೈನಿಕರ ಮಧ್ಯದಲ್ಲಿ ಮರೆಯಾಗಿ ಬಂದು, ಅವನು ಕಳ್ಳನಂತೆ ರಾಮನಾಯಕನ ಅಶ್ವರತ್ನದ ಕಾಲುಗಳನ್ನು ಕಡಿದನು. ಕುದುರೆಯು ನೆಲಕ್ಕೆಬಿದ್ದು ಸತ್ತಿತು. ರಾಮನಾಯಕನು ಭೂಮಿಗೆ ಧುಮುಕಿದನು. ಆದರೆ ಫಲವೇನು? ಮಳೆಯು ಸುರಿದಂತೆ ಆತನಮೇಲೆ ಕತ್ತಿಯ ಏಟುಗಳು ಬಿದ್ದವು. ಅದು ಮಾತ್ರ ಭೂಮಿಗೆ ಕೇಡುಗಾಲ. ವಾಳೆಯಗಾರರಿಗೆ ಕೊನೆಗಾಲ. ರಾಮನಾಯಕನಿಗೆ ಅಂತ್ಯಗಾಲ. ಆ ದೈವಯೋಗಕ್ಕೆ ಯಾರು ತಾನೆ ಏನು ಮಾಡಬಲ್ಲರು? ತಪ್ಪಿಸುವುದು ಯಾರಕೈಲಿ ತಾನೇ ಆದೀತು? ಕರ್ಮದ ಹೊಡೆತದಿಂದ ರಾಮನಾಯಕನಾದರೇನು, ಮತ್ತಾವನಾದರೇನು, ತಪ್ಪಿಸಿಕೊಳ್ಳಲು ಶಕ್ತನಾಗಲಾರನು! ಅದನ್ನವನು ಬಲ್ಲನು. ತನ್ನ ಭಾಗ್ಯದೇವತೆಯಾದ ಲಾವಣ್ಯವತಿಯ ಸುಂದರ ವಿಗ್ರಹವನ್ನು ಒಂದಾವರ್ತಿ ಮನೋನೇತ್ರದಿಂದ ನೋಡಿ ಆನಂದಪಟ್ಟನು. ಸ್ಮೃತಿತಪ್ಪಿ ನೆಲಕ್ಕೆಬಿದ್ದನು.

ವಾಚಕರೇ! ಈ ರಂಗದಿಂದ ನಿಮ್ಮ ನೋಟವನ್ನು ಒಂದಾವರ್ತಿ ನಿಡುಗಲ್ಲಿನ ಕಡೆಗೆ ತಿರುಗಿಸಿರಿ. ಶ್ವೇತಾಶ್ವವನ್ನೇರಿ, ಮಧ್ಯಾಹ್ನದ ಮಾರ್ತಾಂಡನ ಬಿಸಿಲಿನಲ್ಲಿ ಕೈಯಲ್ಲಿನ ಖಡ್ಗವು ಥಳಥಳನೆ ಹೊಳೆಯುತ್ತಿರಲು, ವಾಯುವೇಗದಿಂದ ಬಂದು, ಸೈನ್ಯದಮೇಲೆ ಬಿದ್ದ ಈ ವೀರಾಗ್ರಣಿಯು ಯಾರು? ಆತನ ನೋಟವು ರಾಮನಾಯಕನ ಮೇಲೆ ಇತ್ತು. ಕುದುರೆಯಮೇಲೆ ಕುಳಿತಿದ್ದ ಆತನ

ಕಡೆ ಒಂದು ಕಣ್ಣಿಟ್ಟು, ಪೆನಃಗೊಂಡೆಯ ದಂಡನ್ನು ಕಡಿಕಡಿದು ಕೆಡಹಿ ಮುಂವರಿದು ಹೋಗುತ್ತಿದ್ದನು. ರಾಮನಾಯಕನು ಕುದು ರೆಯಿಂದ ಕೆಳಕ್ಕೆ ಬಿದ್ದದ್ದು ನೋಡಿದನು. ಉನ್ಮಾದವು ತಲೆ ಗೇರಿದವನಂತೆ ಚಂಗಚಂಗನೆ ಕುದುರೆಯನ್ನು ಮುಂದಕ್ಕೆ ಹಾರಿ ಸುತ್ತಾ, ಆ ಅರಸುಮಗನು ಸ್ಮೃತಿತಪ್ಪಿ ಬಿದ್ದಿದ್ದ ಸ್ಥಳಕ್ಕೆ ಬಂದು, ನೆಲಕ್ಕೆ ಧುಮುಕಿ, ರಾಮನಾಯಕನಮೇಲೆ ಕವಿದಿದ್ದ ಭಟರ ತಲೆ ಗಳನ್ನು ಹಾರಿಸಿ, ಆತನನ್ನೆತ್ತಿ ಅಶ್ವದಮೇಲೆ ಹಾಕಿದನು. ತಾನೂ ಅವರ ಮೇಲಿಕ್ಕೆ ಹಾರಿದನು ಕುದುರೆಯನ್ನು ಹಿಂದಕ್ಕೆ ತಿರು ಗಿಸಿ ಸನ್ನೆಮಾಡಿದನು. ಅದು ಮನೋವೇಗದಿಂದ ಸಿಡುಗಲ್ಲು ಕಡೆಗೆ ಓಡಿತು ಎಲ್ಲರೂ ವಿಸ್ಮಯಗೊಂಡು ನೋಡುತ್ತಿದ್ದರು. ಏನು ಮಾಡಲು ಅವರಿಗೆ ತಿಳಿಯಲಿಲ್ಲ.

ನಮ್ಮ ನೂತನ ಯುವಕನು ಸ್ಮೃತಿಹೀನನಾದ ರಾಮನಾ ಯಕನನ್ನು ಆ ರೀತಿ ಕುದುರೆಯಮೇಲೆ ಹಾಕಿಕೊಂಡು ಸಿಡುಗಲ್ಲು ಕೋಟೆಯನ್ನು ಸೇರಿದನು ಕೋಟೆಯ ಬಾಗಿಲಿನಲ್ಲಿ ಅದನ್ನು ನಿಲ್ಲಿಸಿ, ಕೆಳಗಿಳಿದನು. ರಾಮನಾಯಕನನ್ನು ಭುಜದ ಮೇಲಿಟ್ಟುಕೊಂಡು ಒಂದು ಗುಹಾದ್ವಾರವನ್ನು ಹೊಕ್ಕನು. ಮಾಯವಾಗಿ ಹೋದನು.

ಎಲ್ಲಿಗೆ ಹೋದನು! ಅದೋ ನೋಡಿರಿ! ಆ ಗಿರಿಯ ತುದಿ ಯಲ್ಲಿ ನಿಂತಿರುವನು! ಅದು ಸಾಮಾನ್ಯ ಮಾನವರಿಗೆ ಅಗಮ್ಯ ವಾದ ಸ್ಥಳ. ಬಗಲಲ್ಲಿ ಸಣ್ಣದೊಂದು ಕೊಳವಿದೆ. ಆ ಕೊಳದ ನಿರ್ಮಲಜಲದಲ್ಲಿ ರಕ್ತಸಿಕ್ತವಾದ ರಾಮನಾಯಕನ ಮುಖವನ್ನು ತೊಳೆದು, ಉತ್ತರೀಯದಿಂದ ಒರಸಿ, ಸ್ಮೃತಿಬಂದು ಬದುಕುವ ನೆಂಬ ಗುಡ್ಡವಷ್ಟು ಆಶೆಯಿಂದ ಎವೆಯಿಕ್ಕದೆ ಆ ಮುಖ ಕಮಲ ವನ್ನು ನೋಡುತ್ತಿರುವನು.

ರಾಮನಾಯಕನು ಕಣ್ಣುಗಳನ್ನು ತೆರೆಯಲಿಲ್ಲ. ಸ್ವಲ್ಪಮಾತ್ರ ಸ್ಮೃತಿಹುಟ್ಟಿತು. ಮೆಲ್ಲನೆ ತುಟಿಗಳನ್ನು ಕದಲಿಸಿದನು. ಶೀತಲಜಲ

ವನ್ನು ಬಾಯಿಯಲ್ಲಿ ಹಾಕಲು, ಈ ರೀತಿ ನುಡಿದನು. "ಆಹಾ! ಕಾಲವೈಪರೀತ್ಯವು ಬಣ್ಣಿಸಲು ಅಸಾಧ್ಯವಾಯಿತು. ಧರ್ಮಯುದ್ಧದ ದಿನಗಳು ಕಳೆದು ಹೋದವು ಮೋಸವು ಪ್ರಬಲವಾಯಿತು. ಬುದ್ಧಿಬಲ, ಭುಜಬಲಗಳಿಗೆ ಅವಕಾಶವಿಲ್ಲದೇ ಹೋಯಿತು. ವೀರಾಧಿವೀರರೆಂದು ಕೀರ್ತಿಪಡೆದಿದ್ದ ಪಾಳೆಯಗಾರರ ವಂಶವು ಅಂತರಿಸಿತು. ಗುಲಾಮರ ಏಳಿಗೆಯು ಪ್ರಬಲವಾಯಿತು. ಮಾತೃಭೂಮಿಗೆ ಕೇಡುಗಾಲ ಆಸನ್ನವಾಯಿತು

ಹತಭಾಗ್ಯನಾದ ನನ್ನೊಬ್ಬನ ದೆಸೆಯಿಂದ ಎಷ್ಟುಮಂದಿ ಲಯವಾದರು? ರತ್ನಗಿರಿಯಸೈನ್ಯ ಹನ್ನೆರಡು ಸಹಸ್ರ; ನಿಡುಗಲ್ಲಿನ ಪ್ರಜಾಸಮೂಹ, ಪ್ರಾಣಸಮಾನನಾದ ಭೀಮನಾಯಕನು; ಅಸಮಾನ ಪೌರುಷ ಶಾಲಿನಿಯೂ, ಗುಣಮಣಿಯೂ, ವೀರವನಿತೆಯೂ ಆದ ರಂಗನಾಯಕಿಯು. ಆವನಿತಾ ರತ್ನವನ್ನು ಹೊಗಳಲು ನಾನು ಶಕ್ತನಲ್ಲ ಆ ಮಹಾಮಹಿಮಳ ಋಣವನ್ನು ತೀರಿಸಲು ಎಷ್ಟು ಜನ್ಮಗಳಾದರೂ ಸಾಲವು.

ನಾನೇನೋ ಧನ್ಯನಾದೆನು. ಪರಾಜಿತನಾಗಿ, ಪದಚ್ಯುತನಾಗಿ, ಭಾಗ್ಯಹೀನನಾಗಿ ಬದುಕಬಾರದು. ಅಂಥಾ ದುರ್ದೈವವು ನಾನು ಪಡೆದಿರಲಿಲ್ಲ. ನಾನೇನೋ ಪುಣ್ಯಾತ್ಮನೇ! ಆದರೆ, ಆ ಸುಕುಮಾರಿಗೆ, ಗುಣಮಣಿಗೆ, ನನ್ನ ಅರ್ಧಾಂಗಲಕ್ಷ್ಮಿಯಾದ ಲಾವಣ್ಯವತಿಗೆ ಮುಂದೇನುಗತಿ? ಪಾಪಿಯಾದ ನರಸನಾಯಕನು ಆಕೆಯನ್ನು ಎಷ್ಟು ಹಿಂಸೆಪಡಿಸುವನೋ! ಏನು ಮಾಡುವನೋ! ಆಕೆಯ ದೈವವೇನಿರುವದೋ? ಅವಸಾನಕಾಲದಲ್ಲಿ ಆ ಪ್ರಿಯತಮೆಯ ಮುಖ ಸುಧಾಕರನನ್ನು ನೋಡಿ, ಅನುರಾಗಾಮೃತವನ್ನು ಸೇವಿಸುತ್ತಾ, ಪ್ರಾಣವನ್ನು ಬಿಡುವ ಪ್ರಾಪ್ತಿಯು ನನಗೆ ಇಲ್ಲದೇ ಹೋಯಿತು.

ಹೀಗೆಂದು ಹಂಬಲಿಸುತ್ತಿದ್ದ ರಾಮನಾಯಕನು ನೂತನ ಯುವಕನ ಶೈತ್ಯೋಪಚಾರಗಳಿಂದ ಕೊಂಚ ಎಚ್ಚತ್ತು, ಕಣ್ದೆ

ರೆದು, ಆತನ ಮುಖವನ್ನು ನೋಡಿ, ಕರದ್ವಯವನ್ನು ಜೋಡಿಸಿ ಕೈ ಮುಗಿಯಲು ಯತ್ನಿಸಿದನು. ಆ ಯುವಕನು ಅದನ್ನು ನಿವಾರಿಸಿ ಕಣ್ಣೀರು ತುಂಬಿದನು.

ಅತಿ ಪ್ರಯಾಸದಿಂದ ರಾಮನಾಯಕನು "ಮಹಾತ್ಮಾ! ನೀನು ದಾರು? ನಿನ್ನ ಹೆಸರೇನು? ಶತ್ರುಗಳ ಕೈಯಿಂದ ತಪ್ಪಿಸಲು ಅವ ತರಿಸಿದ ನನ್ನ ಪಾಲಿನ ದೇವರೇ ಏನು? ಇದು ದಾವಸ್ಥಳ? ನಾನು ಈಗ ಎಲ್ಲಿರುವೆನು? ಶತ್ರುಗಳೆಲ್ಲಿರುವರು? ನನ್ನ ಪ್ರಾಣಪ್ರಿಯೆ ಯಾದ ಲಾವಣ್ಯವತಿಯನ್ನು ನೀನು ಬಲ್ಲೆಯಾ? ಆ ಕೋಮ ಲಾಂಗಿಯು ಈಗ ಎಲ್ಲಿರುವಳು? ಬೇಗ ಹೇಳು?

**ಯುವಕ:**— ಪೂಜ್ಯರೇ! ನಾನು ಯಾರಾದರೇನು? ಇದು ದಾವಸ್ಥಳವಾದರೇನು? ಲಾವಣ್ಯವತಿಯು ಎಲ್ಲಿದ್ದಮಾತು ನಿಮ ಗೇತಕ್ಕೆ? ನಿಮ್ಮ ಸ್ಥಿತಿಯನ್ನು ನೋಡಿದರೆ ಇಹಲೋಕದಲ್ಲಿ ಒಂದೆ ರಡು ಘಳಿಗೆಯಾದರೂ ಇರುವ ಅವಕಾಶವಿದ್ದಂತಿಲ್ಲ ಪ್ರಪಂಚದ ಲಂಪಟಿಯನ್ನು ಇನ್ನು ಮರೆತುಬಿಟ್ಟು, ಪರಲೋಕದ ದಾರಿಯನ್ನು ಹುಡುಕಬೇಕಾದಸಮಯವು ಸಮೀಪಿಸಿತು. ಆತ್ಮಶಾಂತಿಗಾಗಿ ಕುಲದೇವತೆಯಾದ ಕಾಳಿಯನ್ನು ನೆನೆದು, ಆಕೆಯನ್ನು ಮನದಲ್ಲಿ ನಿಲ್ಲಿಸಿಕೊಂಡು, ಆಕೆಯ ಪವಿತ್ರ ನಾಮವನ್ನು ಉಚ್ಚರಿಸುತ್ತಾ, ಪರಲೋಕ ಯಾತ್ರೆಯನ್ನು ಮಾಡಿರಿ.

**ರಾಮನಾಯಕ:**— ಮಹಾಪುರುಷಾ! ನಿನ್ನ ವಾಕ್ಯಗಳನ್ನು ಕೇಳಿ ನನ್ನ ಮನಸ್ಸಿಗೆ ಒಂದು ವಿಧವಾದ ಆನಂದವುಂಟಾಯಿತು. ನಿನ್ನ ಮೃದುಲವಾಕ್ಯದಲ್ಲಿನ ಮಾಧುರ್ಯವು ನನಗೆ ಈ ಅವಸಾನ ಕಾಲವಲ್ಲಿ ಅಮೃತರಸದಂತಿದೆ. ನನ್ನವಸಾನವು ಸಮೀಪಿಸಿರುವುದು ನಿಜ. ನನಗೆ ಮತಿಭ್ರಮಣೆ ಹುಟ್ಟುತ್ತಿದೆ. ನನ್ನ ಇಷ್ಟದೇವತೆ ಯನ್ನು ಮನದಲ್ಲಿ ನಿಲ್ಲಿಸಿ ಪ್ರಾಣವನ್ನು ಬಿಡುತ್ತಿರುವೆನು. ನನಗೆ ಆಯಾಸವು ಹೆಚ್ಚಾಗುತ್ತಿದೆ. ಮಾತುಗಳು ಬಾರವು. ನಾಲಿಗೆಯು

ಹಿಂದಕ್ಕೆ ಎಳೆಯುತ್ತಿದೆ. ಆ ದೇವತಾ ದರ್ಶನವನ್ನು ಒಂದಾವರ್ತಿ ಮಾಡಿಸಿದರೆ, ನಿನಗೆ ಬಹಳ ಪುಣ್ಯ ಬರುವುದು. ನಾನು ನಿರಾಯಾಸದಿಂದ ಪ್ರಾಣಬಿಡುವೆನು. ನನ್ನ ಆತ್ಮಕ್ಕೆ ತೃಪ್ತಿಯೂ, ಶಾಂತಿಯೂ ಉಂಟಾಗುವುದು.

**ಯುವಕ**:— ಪ್ರಭುವೇ ! ಇದು ನಿಡುಗಲ್ಲುಗುಡ್ಡದತುದಿ. ಇದನ್ನು ಏರಲೂ ಇಳಿಯಲೂ ಸೋಪಾನಗಳಿಲ್ಲ. ಗುಪ್ತವಾದ ಸುರಂಗದ ಮಾರ್ಗದಿಂದ ಇಲ್ಲಿಗೆ ಬಂದಿದ್ದೇನೆ. ಮತ್ತೊಮ್ಮೆ ನಿಮ್ಮನ್ನು ಆ ಕಗ್ಗತ್ತಲೆಯ ಮಾರ್ಗವಾಗಿ ಕರೆದೊಯ್ಯಲು ನನಗೆ ಸಾಧ್ಯವಿಲ್ಲ. ಕಾಳಿಕಾಲಯವು ಬೆಟ್ಟದ ಬುಡದಲ್ಲಿರುವುದು. ಈ ನಿಮ್ಮ ಸ್ಥಿತಿಯಲ್ಲಿ ಅಲ್ಲಿಗೆ ಹೇಗೆ ಕೊಂಡೊಯ್ಯಲಿ ?

**ರಾಮನಾಯಕ**.— ಅಯ್ಯೋ ಅಮಾಯಕನೇ ! ನನಗೆ ಬೇಕಾದದ್ದು ಆ ದೇವಿಯ ದರುಶನವಲ್ಲ. ಆಲಸ್ಯ ಮಾಡಬೇಡ. ನಾನು ನೋಡಲಪೇಕ್ಷಿಸಿದ್ದು ನನ್ನ ಮನೋನಾಯಕಿಯಾದ ಲಾವಣ್ಯವತಿಯನ್ನು ನನಗೆ ಸ್ಮೃತಿ ತಪ್ಪುತ್ತಿದೆ. ವಿಶಾಲ ಹೃದಯನಾದ ನೀನುದಾರೋ ನಾನರಿಯೆ. ನನ್ನನ್ನು ಇಲ್ಲಿಗೆ ಏತಕ್ಕಾಗಿ ತಂದಯೋ ತಿಳಿಯಲಿಲ್ಲ. ಶತ್ರುಗಳ ನಡುವೆ ಬಿದ್ದಿದ್ದ ನನ್ನನ್ನು ಯಾವರೀತಿ ತಂದೆಯೋ ಗೋಚರಿಸದ ಇದೆ. ನಿನಗೆ ನಾನು ಜನ್ಮಜನ್ಮಾಂತರ ಋಣಿಯಾಗಿರುವೆನು. ಒಮ್ಮೆ ಅರಮನೆಗೆ ಹೋಗಿ, ಈ ನನ್ನ ಅಂಗುಲೀಯವನ್ನು ತೋರಿಸಿ, ನಂಬುಗೆ ಹೇಳಿ, ಲಾವಣ್ಯವತಿಯನ್ನು ಕರೆದು ತಾ. ಅಂತ್ಯ ದರ್ಶನವನ್ನು ಮಾಡಿಸಿ ಪುಣ್ಯವನ್ನು ಕಟ್ಟಿಕೋ. ಆಕೆಯನ್ನು ನೋಡುವವರೆಗೂ ಪ್ರಾಣವು ಹೋಗಲಾರದೆ ಹೊಡೆದಾಡುತ್ತಿದೆ. ಆಲಸ್ಯಮಾಡಬೇಡ. ದಯಮಾಡು.

ಈ ಮಾತುಗಳನ್ನು ಕೇಳಿ, ಆ ವ್ಯಕ್ತಿಯು ಗೊಳೋ ಎಂದು ಅತ್ತಳು. ತುಂಬಿ ತುಳುಕುತ್ತಿದ್ದ ಶೋಕವನ್ನು ನುಂಗಿಕೊಂಡು

ಸ್ವಲ್ಪ ಸಮಾಧಾನ ಮಾಡಿಕೊಂಡು, "ಪ್ರಾಣಪತೀ! ಆ ನಿರ್ಭಾಗ್ಯಳಾದ ಲಾವಣ್ಯವತಿಯು ನಾನೇ" ಎಂದು ನುಡಿದಳು. ಹೆಚ್ಚು ಮಾತುಗಳಾಡಲು ಆಕೆಯು ಕೈಲಾಗಲಿಲ್ಲ. ರಾಮನಾಯಕನು ವಿಸ್ಮಯದಿಂದ ಆಕೆಯ ಮೋರೆಯಕಡೆ ದಿಟ್ಟಿಸಿ ನೋಡಿದನು. ಲಾವಣ್ಯವತಿಯು ಪುರುಷವಸನಗಳನ್ನು ತೆಗೆದು, ಪ್ರಾಣವಲ್ಲಭನಿಗೆ ನಿಜರೂಪವನ್ನು ತೋರಿಸಿದಳು! ಆತನಿಗೆ ಬೇಕಾಗಿದ್ದುದು ಅಷ್ಟೇ. ಆಕೆಯ ದರ್ಶನಾಪೇಕ್ಷೆಯ ಬಲದಿಂದಲೇ ಪ್ರಾಣವು ಶರೀರದಲ್ಲಿ ಇದುವರೆಗೂ ನಿಂತು ಇದ್ದದ್ದು! ಆಕೆಯ ಮುಖಚಂದ್ರನನ್ನು ಮತ್ತೊಮ್ಮೆ ನೋಡಿದನು. ಅಪೂರ್ವ ಚೈತನ್ಯದಿಂದ ಮೇಲಕ್ಕೆ ಎದ್ದು ಕೂತನು. ಆಕೆಯನ್ನು ಆಲಿಂಗನಮಾಡಿ ಕಡೆಸಾರೆ ಮನಸಾರ ಮುದ್ದಾಡಿದನು. ಆತನ ಆತ್ಮಕ್ಕೆ ತೃಪ್ತಿಯಾಯಿತು. ಪ್ರಾಣವು ಶರೀರವನ್ನು ಬಿಟ್ಟು ಹಾರಿಹೋಯಿತು. ಕಳೇಬರವು ಆಕೆಯ ತೊಡೆ ಮೇಲೆ ಬಿತ್ತು. ಲಾವಣ್ಯವತಿಯ ಮನಸ್ಸಿನ ಕಿಚ್ಚು ಹೆಚ್ಚಾಯಿತು. ಭರಿಸಲು ಅಸಾಧ್ಯವಾಯಿತು. ನಿಶ್ಚೇಷ್ಟಿತಳಾಗಿ ಪತಿಯ ಶವದ ಮೇಲೆ ಬಿದ್ದಳು.

---

# ೧೩ನೆಯ ಪ್ರಕರಣ.



ರಣಭೂಮಿಯಲ್ಲಿ ತನ್ನ ಸೈನ್ಯದಮಧ್ಯೆ ಸ್ಮೃತಿತಪ್ಪಿಬಿದ್ದಿದ್ದ ರಾಮನಾಯಕನ ಶಿರವನ್ನು ಖಂಡಿಸಿ ಶತ್ರುಶೇಷವಿಲ್ಲದೇ ಮಾಡ ಬೇಕೆಂಬ ಆಶೆಯಿಂದ ಇದ್ದ ನರಸನಾಯಕನು, ಮುಗಿಲಿನ ಮಿಂಚಿ ನಂತೆ ಅಕಸ್ಮಾತ್ತಾಗಿ ಬಂದು, ತನ್ನ ಹಗೆಯುನನ್ನು ತೆಗೆದುಕೊಂಡು ಹೋದ ವೀರನು ದಾರಿರಬಹುದೆಂದು ವಿಸ್ಮಯದಿಂದ ಯೋಚಿಸು ತ್ತಿದ್ದನು. ಬಹಳಹೊತ್ತು ಆತನಿಗೆ ಯೋಚನೆಯೇ ಹರಿಯಲಿಲ್ಲ. ಸೈನಿಕರು ನಿಶ್ಚೇಷ್ಟಿತರಾಗಿ ನಿಂತಿದ್ದರು. ಅಂಥಾ ಘನಕಾರ್ಯವನ್ನು ಮಾಡಿದ್ದದ್ದು ಲಾವಣ್ಯವತಿಯಂದು ಯಾರೂ ಅನುಮಾನಿಸಲಿಲ್ಲ. ನರಸನಾಯಕನ ಮನಸ್ಸೆಲ್ಲಾ ಆ ಸುಂದರಿಯ ಮೇಲೆಯೇ ಇತ್ತು. ಆಕೆಯನ್ನು ನೋಡಲು ಆತುರಪಡುತ್ತಿದ್ದನು. ನೂತನಯೋಧನು ದಾರಾದರೇನು? ರಾಮನಾಯಕನನ್ನು ಬದುಕಿಸಲಾರನು. ಆತನು ಸತ್ತಮೇಲೆ ನನಗೆ ಅಡ್ಡಬರುವವರು ಯಾರೂ ಇರುವುದಿಲ್ಲ. ಜಾಗ್ರತೆ ನಿಡುಗಲ್ಲಿಗೆ ಹೋಗಿ ಚತುರೋಪಾಯುಗಳಿಂದ ಲಾವಣ್ಯ ವತಿಯನ್ನು ವಶಮಾಡಿಕೊಳ್ಳೋಣ." ಎಂದು ನರಸನಾಯಕನು ತನ್ನ ಸೈನ್ಯದೊಡನೆ ನಿಡುಗಲ್ಲಿಗೆ ಬಂದನು. ಆ ಪತಿತನಿಗೆ ಯಾರ್ಯಾರೂ ಅಡ್ಡಬರಲಿಲ್ಲ. ಕೋಟೆಯಲ್ಲಿದ್ದ ಅಲ್ಪಸ್ವಲ್ಪಜನರು ಪಲಾಯನವಾದರು. ನರಸನಾಯಕನು ಅರಮನೆಯನ್ನುಹೊಕ್ಕು ಅಂತಃಪುರವನ್ನೆಲ್ಲಾ ಹುಡುಕಿದನು. ಲಾವಣ್ಯವತಿಯು ಕಣ್ಣಿಗೆ ಬೀಳಲಿಲ್ಲ. ಪಟ್ಟಣವನ್ನೆಲ್ಲ ಶೋಧಿಸಿದನು. ಕಾಣದೇಹೋದಳು. ಆಕೆಯ ಅನ್ವೇಷಣಾರ್ಥವಾಗಿ, ದಿಕ್ಕುದಿಕ್ಕಿಗೆ, ಬೀದಿಬೀದಿಗೆ, ಗುಡ್ಡ ಗುಡ್ಡಕ್ಕೆ, ಗುಹೆಗುಹೆಗಳಿಗೆ ಚಾರರನ್ನು ಕಳುಹಿಸಿಕೊಟ್ಟನು. ಲಾವಣ್ಯ ವತಿಯನ್ನು ಹುಡುಕಿ ತಂದವರಿಗೆ ಅಮೂಲ್ಯವಾದ ಬಹುಮಾನ ಗಳನ್ನು ಕೊಡುವೆನೆಂದು ಆಶೆಮಾತುಗಳನ್ನುಹೇಳಿದನು.

ಎಲ್ಲೆಲ್ಲಿ ಹುಡುಕಿದರೂ ಆಕೆಯು ಕಾಣಲಿಲ್ಲ. ನರಸನಾಯಕನಿಗೆ ನಿರಾಶೆ ಹೆಚ್ಚಾಯಿತು. ಸಂತಾಪವು ಪ್ರಬಲವಾಯಿತು. ಕೋಪವಾದರೋ ಮೇರೆಮೀರಿಹೋಯಿತು. ಅದನ್ನು ಯಾರಮೇಲೆ ತೋರಿಸಿದನೆಂದುಕೊಂಡಿರಿ. ಆ ಚೈತನ್ಯವಾದ ಅರಮನೆಯಮೇಲೆ ಗುಡಿಗೋಪುರಗಳಮೇಲೆ, ಕೋಟೆ ಬುರುಜುಗಳಮೇಲೆ, ತೋರಿಸಿದನು. ಅವುಗಳನ್ನೆಲ್ಲ ನಾಶಮಾಡಿರೆಂದು ಆಜ್ಞೆಮಾಡಿದನು. ಅದು ಏನು ಧರ್ಮವೋ, ಯಾವನ್ಯಾಯವೋ, ಎಂಥಸೇಡೋ ಅವನಿಗೇ ತಿಳಿಯಬೇಕು. ಅವನ ಆಜ್ಞೆಯಾದದ್ದೇತಡ, ಪಟ್ಟಣವನ್ನು ಒಂದುಕಡೆಯಿಂದ ಹಾಳುಮಾಡಹತ್ತಿದ ಆತನ ದಂಡಿಗೇ ತಿಳಿಯಬೇಕು. "ಕುಂಬಾರನಿಗೆ ವರುಷ ಡೊಣ್ಣೆಗೆ ನಿಮಿಷ" ಎಂಬಂತೆ, ಎಷ್ಟೋವ್ಯಯ ಪ್ರಯಾಸಗಳಿಂದ ಧೀರರಾದ ಪಾಳೆಯಗಾರರು ನಿರ್ಮಿಸಿದ್ದ ಆ ಸುಂದರ ಭವನಗಳನ್ನು, ಆ ಶೃಂಗಾರಮಂಟಪಗಳನ್ನು, ಆ ಬಲವಾದ ಕೋಟೆಯನ್ನು, ಆ ವಿಶಾಲವಾದ ಬುರುಜುಗಳನ್ನು, ಪಾಪಿಯಾದ ನರಸನಾಯಕನು ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಹಾಳುಮಾಡಿಸಿದನು. ಆದರೇನು ? ಅವನಿಗೆ ಲಾವಣ್ಯವತಿಯು ಲಭಿಸಿದಳೇ ?

ಹತಭಾಗ್ಯಳಾದ ಲಾವಣ್ಯವತಿಯು ಪತಿಯ ಕಳೇಬರವನ್ನು ತೊಡೆಯಮೇಲೆ ಹಾಕಿಕೊಂಡು ಗೋಳಾಡುತ್ತಿದ್ದಳು. "ಅಯ್ಯೋ! ದೈವವೇ, ನಾನೆಂಥಾ ನಿರ್ಭಾಗ್ಯಳು ? ಮದುವೆಯಾಗಿ ಮೂರುದಿನಗಳಾದರೂ ಆಗಲಿಲ್ಲ. ಕಲ್ಯಾಣಮಂಟಪವನ್ನು ಕದಲಿಸಲಿಲ್ಲ. ಹಾಕಿದ ಹಂದರಗಳು ಬಿಚ್ಚಲಿಲ್ಲ. ಕಟ್ಟಿದ ತೋರಣಗಳು ಬಾಡಲಿಲ್ಲ. ಇಷ್ಟರಲ್ಲಿಯೇ ಪತಿಯನ್ನು ಕಳೆದುಕೊಂಡೆನು. ಈ ವೀರಾಧಿವೀರನು ಅಭಯಪ್ರದಾನ ಮಾಡಿದ್ದನು. ನನಗೆ ಇನ್ನೆಲ್ಲಿ ಕಷ್ಟಗಳೆಂದು ನಂಬಿದೆನಾಗಲಿ, ಮೋಸಗಾರನಾದ ನರಸನಾಯಕನು ಆತನನ್ನೇ ನುಂಗಿಕೊಡುವನೆಂದು ಅನುಮಾನಿಸಲಿಲ್ಲ. ಪ್ರೇಮದ ಪುಂಜನಾದಪತಿಯು ಲಭಿಸಿದ್ದ ನನಗೆ ಲೋಕವು ಆನಂದಮಯವೆಂದು ಹಿಗ್ಗಿದೆನಾಗಲಿ, ಇಂಥಹಸಂಕಟವು ಪ್ರಾಪ್ತಿಯಾಗುವುದೆಂದು ಒಂದಾವರ್ತಿಯಾದರೂ ನೆನೆಯಲಿಲ್ಲ. ಬಂಧುಮಿತ್ರಪರಿವಾರದೊಡನೆ ಮೆರೆಯುವೆನೆಂದು

ಗರ್ವಿಸಿದೆನಾಗಲಿ, ಎಲ್ಲರನ್ನೂ ಹಗೆಗಳಿಗೆ ತುತ್ತುಮಾಡಿ, ಪತಿಯ ಕಳೇಬರದ ಬಳಿಯಲ್ಲಿ, ಏಕಾಂಗಿನಿಯಾಗಿ ಗೋಳಾಡುವುದು ನನ್ನ ಹಣೆಯಬರಹವೆಂದು ನಾನರಿಯೆ. ವಿಧೀ! ಹತವಿಧೀ!! ನನ್ನನ್ನು ಯಾವಸ್ಥಿತಿಗೆ ತಂದಿಟ್ಟೆ!!!

ನನ್ನಗತಿ ಏನಾದರೇನು? ನನಗಾಗಿ ಈ ವೀರನು, ಸುಕುಮಾರನು, ಹೋರಾಡಿ ಪ್ರಾಣವನ್ನೇ ಕಳೆದುಕೊಂಡನು. ಈತನ ಔದಾರ್ಯವನ್ನೂ, ಆರ್ತರಕ್ಷಣಾದೀಕ್ಷೆಯನ್ನೂ ನಾನು ಎಷ್ಟೆಂದು ಹೊಗಳಲಿ. ಈತನ ಪ್ರೇಮ, ನನ್ನ ಮೇಲಿದ್ದ ಅವ್ಯಾಜಪ್ರೇಮ ನೆನಪಿಗೆ ಬಂದರೆ ಹೊಟ್ಟೆಯಲ್ಲಿ ಉರಿಯುವ ಕೊಳ್ಳಿಯನ್ನಿಟ್ಟಂತೆ ಆಗುವದು. ಮರಣಕಾಲದಲ್ಲಿ ನನಗಾಗಿ ಪ್ರಾಣವನ್ನು ಬಿಗಿಹಿಡಿದಿದ್ದನು. ನನ್ನನ್ನು ನೋಡಿ, ಆಲಿಂಗನೆಮಾಡಿ, ಮುದ್ದಾಡಿ, ಪ್ರಾಣವನ್ನು ಬಿಟ್ಟ ಈ ನನ್ನ ಪತಿಯ ಅನುರಾಗಕ್ಕೆ ಎಣೆಯುಂಟೆ? ಅದಕ್ಕೆ ಪ್ರತ್ಯುಪಕಾರವುಂಟೆ?" ಎಂದು ಗೋಳಿಟ್ಟಳು. ಆಕೆಯ ಶೋಕವು ಘೋರವಾಗಿತ್ತು. ಬುದ್ಧಿ ಚಪಲವಾಯಿತು. ಉನ್ಮಾದವು ತಲೆದೋರಿತು. ಆಕೆಯು "ನಾಥಾ! ಏಳು, ಮಾತನಾಡು. ಸುಮ್ಮನೆ ಯಾಕೆಯಿರುವೆ? ನಾನು ನಿನ್ನ ಪ್ರಾಣಪ್ರಿಯೆಯು. ಪಟ್ಟದರಸಿಯು. ಲಾವಣ್ಯವತಿಯು. ನನ್ನ ಮೇಲೆ ಏಕೆ ಮುನಿದಿರುವೆ? ನಾನು ಮಾಡಿದ ಅಪರಾಧವಾದರೂ ಏನು?" ಎಂದು ಮತಿವಿಹೀನವಾದ ಮಾತುಗಳನ್ನಾಡಿದಳು. ಸ್ವಲ್ಪ ಜ್ಞಾನವನ್ನು ತಂದುಕೊಂಡಳು. ಪತಿಯು ನಿರ್ಜೀವನೆಂದು ಅರಿತವಳಾಗಿ, ದಿಕ್ಕುದಿಕ್ಕುಗಳಿಗೆ, ಬೆಟ್ಟಗುಡ್ಡಗಳಿಗೆ, ಮೃಗಪಕ್ಷಿಗಳಿಗೆ, ತನ್ನ ಕಾಂತನ ಪ್ರಾಣದಾನವನ್ನು ಮಾಡಿರೆಂದು ಮೊರೆಯಿಟ್ಟಳು. ಮಹಾಕಾಳಿಯನ್ನು ಧ್ಯಾನಿಸಿದಳು. ಎಷ್ಟೋಹರಿಕೆಗಳು ಮಾಡಿದಳು. ಆದರೇನು? ರಾಮನಾಯಕನು ಬದುಕಲಿಲ್ಲ. ಆಕೆಯ ಸಂಕಟವು ಕಡಿಮೆಯಾಗಲಿಲ್ಲ. ಹೋ ಎಂದು ಗೋಳಿಟ್ಟಳು. ಬೆಟ್ಟವೆಲ್ಲ ಪ್ರತಿಧ್ವನಿಗೊಟ್ಟಿತು. ಪ್ರಕೃತಿಯೆಲ್ಲವೂ ಆಕೆಯೊಡನೆ ಗೋಳಿಡುತ್ತ ಇದ್ದಂತೆ ತೋರಿತು.

ಈ ರೀತಿ ಆಕೆಯು ಗೋಳಿಡಿತ್ತಿರುವ ಸಮಯದಲ್ಲಿ, ಭಯಂಕ ರಾಕಾರರೂ, ದಂಡಧರರೂ ಆದ ನಾಲ್ಕು ಮಂದಿ ಭಟರು ಬಂದು ಆಕೆಯಮುಂದೆ ನಿಂತರು. ತನ್ನ ಕಾಂತನ ಪ್ರಾಣವನ್ನು ತೆಗೆದು ಕೊಂಡು ಹೋಗಲು ಬಂದ ಕಾಲನಭಟರೆಂದೆಣಿಸಿ, ಆ ಕೋಮ ಲಾಂಗಿಯು ದೀನಾತಿದೀನಳಾಗಿ "ಮಹಾತ್ಮರಿರಾ! ನನ್ನ ಪತಿಯ ಪ್ರಾಣವನ್ನು ಒಯ್ಯಬೇಡಿರಿ. ನನ್ನನ್ನು ಪರದೇಸಿಯನ್ನಾಗಿ ಮಾಡ ಬೇಡಿರಿ. ನಿಮ್ಮ ಪ್ರಭುವಿಗೆ ನನ್ನ ಬಿನ್ನಹವನ್ನು ಹೇಳಿರಿ. ಕೃಪೆ ಮಾಡಿರಿ. ಅಬಲೆಯ ಗೋಳನ್ನು ಕೇಳಿರಿ. ನಿಮಗೆ ಬಹಳ ಪುಣ್ಯ ಬರುವುದು" ಎಂದಳು.

**ಭಟರು**:— ಅಮ್ಮಾ! ಸತ್ತುಹೋಗಿರುವ ನಿನ್ನ ಗಂಡನ ಗೋಜು ನಮಗೇಕೆ? ನಿನ್ನನ್ನು ತರಬೇಕೆಂದು ನಮ್ಮ ಒಡೆಯನ ಆಜ್ಞೆಯಿರುವುದು.

**ಲಾವಣ್ಯವತಿ**:— ಅಪ್ಪಾ! ನಿಮ್ಮ ಒಡೆಯನಿಗೆ ನನ್ನಿಂದೇನು ಕೆಲಸವಿದೆ? ನನ್ನ ನಾಥನಬಳಿಗೆ ಕರಸಿದನೇನು? ನಮ್ಮಿಬ್ಬರನ್ನೂ ಕೂಡಿಸಿ ಪುಣ್ಯಕಟ್ಟಿಕೊಳ್ಳಲೆಣಿಸಿದನೇನು? ಹಾಗಾದರೆ ಆತನು ಎಂಥಹ ಕರುಣಿಯು?

**ಭಟರು**:— ತಾಯಿ! ನಿಮ್ಮ ಮಾತುಗಳೇನೂ ನಮಗೆ ಅರ್ಥವಾಗಲಿಲ್ಲ. ನಾವು ಪೆನುಗೊಂಡೆಯ ಭಟರು. ನಿಮ್ಮನ್ನು ಹುಡುಕಿತರಬೇಕೆಂದು ನಮಗೆ ಸ್ವಾಮಿಯ ಆಜ್ಞೆಯಾಗಿದೆ. ರಾಮ ನಾಯಕನ ಶವದಿಂದ ನಿಮಗೆ ಏನು ಫಲ? ಅದನ್ನಾಚೆಗೆ ತಳ್ಳಿ, ನರಸನಾಯಕನ ಬಳಿಗೆ ಹೋಗುವ ಬನ್ನಿ.

ಈ ಮಾತುಗಳನ್ನು ಕೇಳಿ ಲಾವಣ್ಯವತಿಯು ಥರಥರನೆ ನಡುಗಿ ದಳು. ಪ್ರಿಯಕಾಂತನ ಮರಣದಿಂದುಟಾಗಿದ್ದ ಸಂಕಟವೇ ಆ ಸುಕು ಮಾರಿಗೆ ಸಾಕಾಗಿತ್ತು. ಅದರಮೇಲೆ ಮತ್ತೊಂದು ಅಗಾಧವಾದ ಕಷ್ಟವು ಪ್ರಾಪ್ತವಾಯಿತು. ನರಸನಾಯಕನು ನಿಡುಗಲ್ಲಿಗೆ ಬಂದೇ

ಬಿಟ್ಟನು. ಇನ್ನು ತನ್ನಗತಿ ಏನಾಗುವುದೋ ಎಂದು ಕಳವಳ ಗೊಂಡಳು. ಸ್ವಲ್ಪಧೈರ್ಯದಿಂದ "ಅಯ್ಯೋ! ಭಟರೇ! ನಾನು ಪತಿವಿಯೋಗದಿಂದ ಗೋಳಾಡುತ್ತಿರುವಸಮಯದಲ್ಲಿ, ನೀವು ನನ್ನನ್ನು ಮತ್ತಿಷ್ಟು ನೋಯಿಸುವುದು ಉಚಿತವಲ್ಲ. ನಿಮ್ಮ ಹೊಟ್ಟೆಯಲ್ಲೇನು ಹೆಣ್ಣುಮಕ್ಕಳಿಲ್ಲವೇ? ನಾನಿಲ್ಲಿರುವದು ಆ ಕಿರಾತನಿಗೆ ತಿಳುಹಿಸ ಬೇಡಿರಿ ನಮಸ್ಕಾರಮಾಡಿ ಬೇಡಿಕೊಳ್ಳುವೆನು. ನಿಮಗೆ ಪುಣ್ಯ ಬರುವದು. ಪಾಳೆಯಗಾರರಲ್ಲಿ ಅಗ್ರಗಣ್ಯನೆಂದು ಎನಿಸಿಕೊಂಡು, ರತ್ನಗಿರಿಗೆ ಪ್ರಭುವಾಗಿಮೆರೆದ ಈ ಪ್ರರಾಕ್ರಮಿಯ ಶರೀರವನ್ನು ಹದ್ದು ಕಾಗೆಗಳಪಾಲು ಮಾಡಲಾರೆನು. ಉತ್ತರ ಕ್ರಿಯೆಗಳನ್ನು ಪೂರೈಸಿ ನನ್ನದಾರಿ ನಾನು ನೋಡಿಕೊಳ್ಳುವೆನು. ನಿಮ್ಮ ಮಗಳೆಂದು ಭಾವಿಸಿ, ನನ್ನಲ್ಲಿ ಅನುಗ್ರಹಿಸಿ, ಆಪತಿತನಿಗೆ ನಾನಿರುವ ಸ್ಥಳದಗುಟ್ಟು ಹೇಳದೇ, ಇಲ್ಲಿಗೆ ಬರುವ ಮಾರ್ಗವನ್ನು ತೋರಿಸದೇ ಪುಣ್ಯಕಟ್ಟಿಕೊಳ್ಳಿರಿ." ಎಂದು ಅತ್ಯಂತ ದೀನಳಾಗಿ ಬೇಡಿಕೊಂಡಳು. ಆಕೆಯ ಸಂತಾಪವು ಕಲ್ಲನ್ನು ಕರಗಿಸುವಂತಿತ್ತು ಆದರೆ ಆ ಭಟರಿಗೆ ಮಾತ್ರ ಮನಸು ಚಲಿಸಲಿಲ್ಲ. ಆಕೆಯ ಮಾತುಗಳನ್ನು ಕೇಳಿ ಅವರಿಗೆ ನಗೆಬಂದಿತು. ಬಹುಮಾನದ ಆಶೆಯು ಅವರಿಗೆ ತುಂಬಾಯಿತ್ತು. ಆ ಆಶಾ ಪಿಶಾ ಚಿಯವಶನಾದವನಿಗೆ, ಯುಕ್ತಾಯುಕ್ತವಿಲ್ಲ, ನ್ಯಾಯಾನ್ಯಾಯವಿಲ್ಲ, ಪಾಪಪುಣ್ಯವಿಲ್ಲ. ಅವರು "ತಾಯಿ! ಲಾವಣ್ಯವತೀ! ನಿಮಗೇ ತಕ್ಕೆ ಇನ್ನೂ ಆ ಶವವಮೇಲೆಭ್ರಾಂತಿ? ಅದನ್ನು ಆಚೆಗೆ ತಳ್ಳಿಬಿಡಿರಿ. ನಮ್ಮೊಡನೆ ಬನ್ನಿರಿ. ನರಸನಾಯಕನನ್ನು ಕೈಗೊಳ್ಳಿರಿ. ಸುಖದಿಂದ ಬದುಕಿರಿ." ಎಂದು ಹಿತಬೋಧನೆಯನ್ನು ಮಾಡಿದರು.

**ಲಾವಣ್ಯವತಿ**:— ಅಯ್ಯಾ! ನನಗೆ ಸುಖವು ಬೇಕಿಲ್ಲ. ಸಾವಿಗೆ ಅಂಜುವದಿಲ್ಲ. ನಾನು ಪ್ರಾಣದಿಂದಿದ್ದೂ ಪತಿಯ ಶರೀರ ವನ್ನು ನಾಯಿ ನರಿಗಳಪಾಲುಮಾಡಲಾರೆನು. ಆತನ ಚರಮಕರ್ಮ ಗಳನ್ನು ಮಾಡಬೇಕು. ಮನಸು ಬಂದರೆ ನನಗೆ ಸಹಾಯ ಮಾಡಿರಿ. ಇಲ್ಲವಾದರೆ ನೀವು ಬಂದದಾರಿಯನ್ನು ಹಿಡಿದುಹೋಗಿರಿ.

ಭಟರು ಈ ಮಾತುಗಳನ್ನು ಕೇಳಿ, ಆಕೆಯೊಡನೆ ಹೆಚ್ಚಿನ ಚರ್ಚೆಯಿಂದ ಫಲವಿಲ್ಲವೆಂದು ನಂಬಿ, ತಮ್ಮಲ್ಲಿ ಓರ್ವನನ್ನು ನರಸ ನಾಯಕನ ಬಳಿಗೆ ಕಳುಹಿಸಿದರು. ಅವನು ಒಡೆಯನ ಬಳಿಗೆ ಬಂದು "ಸ್ವಾಮಿಾ! ಲಾವಣ್ಯವತಿಯನ್ನು ನೋಡಿಬಂದೆವೆಂದು ಹೇಳಿದನು. ಈ ಮಾತನ್ನು ಕೇಳಿದೊಡನೆಯೇ ನರಸನಾಯಕನಿಗೆ ಮಿತಿಮಿಾರಿದ ಸಂತೋಷವಾಯಿತು. ಆಕೆಯು ಇನ್ನು ತನ್ನವಳೆಂದು ನಂಬಿದನು.

**ನರಸನಾಯಕ**:— ಆಕೆಯು ಈಗ ಎಲ್ಲಿರುವಳು?

**ಭಟ**:—ಪರ್ವತದ ಶಿಖರದಮೇಲೆ ಒಂದು ಗುಹೆಯ ದ್ವಾರದಲ್ಲಿ ಕುಳಿತಿರುವಳು.

**ನರಸನಾಯಕ**:— ಏನು ಮಾಡುತ್ತಿರುವಳು?

**ಭಟ**.— ರಾಮನಾಯಕನ ಶವವನ್ನು ತೊಡೆಯಮೇಲೆ ಹಾಕಿಕೊಂಡು ಗೋಳಾಡುತ್ತಿರುವಳು.

**ನರಸನಾಯಕ**:— ಅದು ಆಕೆಗೆ ಎಲ್ಲಿ ಸಿಕ್ಕಿತು?

**ಭಟ**:— ನನಗೆ ಗೊತ್ತಿಲ್ಲ.

**ನರಸನಾಯಕ**:—ರಾಮನಾಯಕನು ಸತ್ತಿರುವುದು ನಿಜವಷ್ಟೆ?

**ಭಟ**:— ಅನುಮಾನವಿಲ್ಲ.

**ನರಸನಾಯಕ**:— ಆದರೆ ಆಕೆಯಿರುವಲ್ಲಿಗೆ ಹೋಗೋಣ ನಡೆ.

**ಭಟ**:— ಆ ಸ್ಥಳಕ್ಕೆ ಹೋಗಬೇಕೆಂದರೆ ಕಗ್ಗತ್ತಲೆ ಮುಸುಕಿರುವ ಒಂದು ಸುರಂಗದ ಮಾರ್ಗವಾಗಿ ಹೋಗಬೇಕು. ಅದು ತಮಗೆ ಸಾಧ್ಯವಲ್ಲ.

**ನರಸನಾಯಕ**:— ನೀನು ಯಾವರೀತಿ ಹೋಗಿಬಂದೆ?

**ಭಟ**:— ತಮ್ಮ ಅಪ್ಪಣೆಯಮೇರೆಗೆ ಅನೇಕರು ಅನೇಕಕಡೆಯಲ್ಲಿ ಆಕೆಯನ್ನು ಹುಡುಕುತ್ತಿದ್ದೆವು. ಹಾಗಿರುವ ಸಮಯದಲ್ಲಿ

ಒಬ್ಬ ಸ್ತ್ರೀಯಳಗೋಳು ನಮ್ಮ ಕಿವಿಗೆ ಬಿತ್ತು. ಆ ಧ್ವನಿಯನ್ನು ಹಿಡಿದು ನಾವು ಆಕೆಯಿರುವ ಶಿಖರದ ಬುಡಕ್ಕೆ ಹೋಗಿ ನಿಂತೆವು. ಹೆಣ್ಣುಮಗಳ ಧ್ವನಿಯೆಂದು ಗುರ್ತಿಸಿದೆವು. ಮೇಲಕ್ಕೆ ಹೋಗಲು ಸುತ್ತುನೋಡಿದರೂ ಸೋಪಾನಗಳು ಕಾಣಬರಲಿಲ್ಲ. ಆ ಸ್ಥಳಕ್ಕೆ ಹೋಗಲು ರಹಸ್ಯವಾದ ಮಾರ್ಗವು ಇದ್ದೇತೀರಬೇಕೆಂದು ನಂಬಿ ಹುಡುಕಹತ್ತಿದ್ದೆವು. ಆ ಮಾರ್ಗವಾಗಿ ಕಗ್ಗತ್ತಲೆಯಲ್ಲಿಯೇ ಸೋಪಾನಗಳನ್ನು ಏರಿಯೇರಿ ಬೆಟ್ಟದ ತುದಿಗೆ ಹೋಗಿ ಆಕೆಯನ್ನು ನೋಡಿದೆವು.

**ನರಸನಾಯಕ**:— ನೀವು ಆಕೆಯನ್ನು ಏತಕ್ಕೆ ಕರೆದುತರಲಿಲ್ಲ ?

**ಭಟ**:— ಬರಲೊಲ್ಲಳು. ಬಿಟ್ಟುಹೋಗಿರೆಂದು ಕೈಕಾಲುಗಳನ್ನು ಹಿಡಿಯಲು ಬರುವಳು. ನಿಮಗೆ ತಾನಿರುವಸ್ಥಳದ ಗುಟ್ಟನ್ನು ಹೇಳಬೇಡಿರೆಂದು ಬೇಡಿಕೊಳ್ಳುವಳು. ನೀವೇ ದಯಮಾಡಬೇಕು.

ನರಸನಾಯಕನು ತಡಮಾಡಲಿಲ್ಲ. ನೂರಾರು ಕರದೀವಟಿಕೆಗಳನ್ನು ಹಿಡಿಸಿಕೊಂಡು ಹಿಂದೂಮುಂದೂ ಭಟರ ಕಾವಲಿನಿಂದ ಆ ರಹಸ್ಯದ ಸೋಪಾನಮಾರ್ಗವಾಗಿ ಲಾವಣ್ಯವತಿ ಕುಳಿತಿದ್ದ ಸ್ಥಳಕ್ಕೆ ಬಂದನು. ಆಕೆಯ ಸೌಂದರ್ಯವನ್ನು ನೋಡಿ ಮರುಳಾದನು. ಸಮೀಪಿಸಿ ಮನಸಾರ ಆ ಕುಸುಮಕೋಮಲೆಯನ್ನು ನೋಡಿ, ಆಕೆಯ ರೂಪಲಾವಣ್ಯಗಳನ್ನು ಕೊಂಡಾಡಿದನು. ಅಂಥಾ ಸುಂದರಾಂಗಿಯು ತನಗೆ ಲಭಿಸಿದಳೆಂದು ಹಿಗ್ಗಿದನು.

ಲಾವಣ್ಯವತಿಯು ಇದೆಲ್ಲವನ್ನೂ ನೋಡಿದಳು ಭಯವನ್ನು ಬಿಟ್ಟಳು. ಧೈರ್ಯವನ್ನು ವಹಿಸಿದಳು. ಅಲಕ್ಷ್ಯಭಾವದಿಂದ ಆವನ ಕಡೆ ಒಂದಾವರ್ತಿ ನೋಡಿದಳು.

**ನರಸನಾಯಕ**:— ಹೇ! ಲಾವಣ್ಯವತೀ! ನಾನು ಹೇಳುವ ಬುದ್ಧಿಯಮಾತುಗಳನ್ನು ಕೇಳುವಿಯಾ ?

**ಲಾವಣ್ಯವತಿ**:— ಅದೇನು ಹೇಳು

**ನರಸನಾಯಕ**:— ಆ ಶವವನ್ನು ಆಚೆಗೆ ತಳ್ಳು.

**ಲಾವಣ್ಯವತಿ**:— ನಿನ್ನ ಸೈನ್ಯದಮಧ್ಯೆ ಸ್ಮೃತಿಹೀನನಾಗಿ ಬಿದ್ದಿದ್ದ ಈ ವೀರನನ್ನು ಪುರುಷರೂಪದಿಂದ ಬಂದು, ಎದುರು ಬಿದ್ದವರನ್ನು ಕೊಂದು, ಕುದುರೆಯ ಮೇಲೆ ಹಾಕಿಕೊಂಡು ಇಲ್ಲಿಗೆ ತಂದದ್ದು ನೀನು ಹೇಳಿದಂತೆ ಆಚೆಗೆ ತಳ್ಳುವದಕ್ಕಲ್ಲ.

**ನರಸನಾಯಕ**:— ಏನು, ಏನು! ಆ ಕಾರ್ಯವನ್ನು ಮಾಡಿದ್ದು ನೀನೇನು ?

**ಲಾವಣ್ಯವತಿ**:— ಯಾರಾದರೆ ನಿನಗೇನು ? ಪಾಳೆಯಗಾರರ ವಂಶವನ್ನು ಹಾಳುಮಾಡಲು ನೀನು ಅವತರಿಸಿದ್ದೆ. ಆ ಕಾರ್ಯವನ್ನು ಕೈಗೂಡಿಸಿಕೊಂಡೆ. ಇನ್ನು ನೀನು ಬಂದದಾರಿಯನ್ನು ಹಿಡಿದು ಹೊರಟುಹೋಗು.

**ನರಸನಾಯಕ**:— ಅದಕ್ಕಲ್ಲ ನಾನು ಬಂದದ್ದು.

**ಲಾವಣ್ಯವತಿ**:— ಮತ್ತೇತಕ್ಕೆ ಬಂದಿರುವಿ ?

**ನರಸನಾಯಕ**:— ನಿನ್ನನ್ನು ಕರೆದೊಯ್ಯಲು ಬಂದಿರುವೆನು.

**ಲಾವಣ್ಯವತಿ**:— ಎಲೋ ! ನೀಚಾ ! ನಾನು ನಿನಗೆ ಲಭಿಸುವೆನೆಂದು ತಿಳಿದಿರುವೆಯಾ ?

**ನರಸನಾಯಕ**:— ಲಭಿಸದೇ ಮತ್ತೆಲ್ಲಿಗೆ ಹೋಗಬಲ್ಲೆ ?

**ಲಾವಣ್ಯವತಿ**:— ಅದು ಈ ಜನ್ಮದಮಾತಲ್ಲ. ಹೆಚ್ಚು ಮಾತುಗಳಿಗೆ ಅವಕಾಶಕೊಡಬೇಡ. ನನ್ನಗೋಳು ನನ್ನದಾಗಿದೆ. ನಿನ್ನದಾರಿಹಿಡಿದು ನೀನುಹೋಗು.

**ನರಸನಾಯಕ**:— ಸುಂದರೀ ! ನಿನಗೆ ಮಂಕುಕವಿದಿದೆ. ನಿದಾನಿಸಿನೋಡು ನಿನ್ನ ಈ ಎಳೆಯಪ್ರಾಯವನ್ನು ಈ ಗೋಳಾಟದಲ್ಲಿ ಏತಕ್ಕೆಕಳೆಯುವೆ ? ರಾಮನಾಯಕನಾರು ? ನೀನಾರು ?

ಮೊದಲಾರಭ್ಯವೋಹಿಸಿ, ನಿನಗಾಗಿಹೋರಾಡಿ ಹಗೆಗಳನ್ನು ಗೆದ್ದು ನಿನ್ನ ಸೇವಾನುಸೇವಕನಾಗಿ ನಡೆದುಕೊಳ್ಳಲುಬಂದಿರುವ ನನ್ನನ್ನು ವರಿಸಿ, ಪೆನುಗೊಂಡೆಯ ರಾಣಿಯಾಗು. ಸಕಲಭೋಗಗಳನ್ನು ಅನುಭವಿಸುವೆ.

**ಲಾವಣ್ಯವತಿ**:— ಎಲೋ! ಕುಮತೀ! ಭೋಗಾಪೇಕ್ಷೆಯನ್ನು ನನಗೆ ತೋರಿಸುವೆಯಾ? ನಿನ್ನಭೋಗವು ಬೇಡ, ಭಾಗ್ಯವು ಬೇಡ ನನ್ನಮೇಲಿನ ಒಣಭ್ರಾಂತಿಯನ್ನು ಬಿಟ್ಟು ಸುಮ್ಮನೇ ಹೋಗು.

**ನರಸನಾಯಕ**:— ಕೋಮಲಾಂಗೀ! ಒಣಭ್ರಾಂತಿಯು ನನ್ನದೋ, ನಿನ್ನದೋ ನೀನೇ ಯೋಚಿಸಿನೋಡು. ಹೆಣದಮೇಲಿನ ಭ್ರಾಂತಿಯಿಂದ ನನ್ನನ್ನು ಇಷ್ಟು ಧಿಕ್ಕರಿಸುವೆಯಲ್ಲಾ ಒಣಭ್ರಾಂತಿ ಯಾರದು? ಆ ಹೆಣದಿಂದ ನೀನೇನು ಸುಖಪಡಲೆಣಿಸಿದೆ? ಅದು ನನಗೇನು ಅಡ್ಡಬಂದೀತೇ? ಬಲಾತ್ಕಾರದಿಂದ ನಿನ್ನನ್ನು ಒಯ್ಯುವದು ನನಗೆಬೇಕಿಲ್ಲ. ನೀನಾದರೂ ಅಷ್ಟಕ್ಕೆ ಅವಕಾಶಕೊಡಬೇಡ. ಕುಲದಲ್ಲಿ, ಬಲದಲ್ಲಿ, ರೂಪದಲ್ಲಿ, ಗುಣದಲ್ಲಿ, ಧನದಲ್ಲಿ ಯವ್ವನದಲ್ಲಿ ನನಗೆ ಸರಿಯಾದವರು ನಿನಗೆ ದೊರೆಯಲಾರರು. ನನ್ನಮಾತು ಲಾಲಿಸಿ ನನ್ನನ್ನು ವರಿಸು. ಇಲ್ಲವಾದರೆ × × × ×

**ಲಾವಣ್ಯವತಿ**:— ಎಲೋ! ನಾಯಿ. ನಿನ್ನಕುಲವನ್ನು ನಾ ಬಲ್ಲೆ. ಬಲವನ್ನುಬಲ್ಲೆ. ನಿನ್ನರೂಪು ಯೌವ್ವನಗಳನ್ನು ಸುಡು. ನಾನು ನಿನಗೆ ಆಧೀನಳಾಗುವದು ಸಟೆ. ಇಲ್ಲವಾದರೆ, ನೀನೇನು ಮಾಡಬಲ್ಲೆ?

**ನರಸನಾಯಕ**:—ಬಲವಂತದಿಂದ ನಿನ್ನನ್ನು ತೆಗೆದುಕೊಂಡು ಹೋಗುವೆನು.

**ಲಾವಣ್ಯವತಿ**:— ನಿನಗೇನೋ ಕೇಡುಗಾಲ ಸಮೀಪಿಸಿತು. ಪತಿವಿಯೋಗದಿಂದ ಕುಂದಿಹೋಗುತ್ತಿರುವ ಪರನಾರಿಯನ್ನು ಕೆಣಕ

ಬೇಡ. ಇದಲ್ಲದೇ ನಾನಾರೆಂದುತಿಳಿದೆ? ನಿನ್ನ ಜನನವನ್ನು ಜ್ಞಾಪಕಕ್ಕೆ ತಂದುಕೋ. ನನ್ನನ್ನು ಸಮೀಪಿಸುವ ಯೋಗ್ಯತೆಯಾದರೂ ನಿನಗಿಲ್ಲ. ಕಾಮಾಂಧತೆಯಿಂದ ಕೆಟ್ಟುಹೋಗಬೇಡ. ನಿನಗೆ ತಕ್ಕವನಿತೆಯರು ಅನೇಕರಿರುವರು. ನಿನ್ನ ಕೋರಿಕೆಯನ್ನು ಅವರಲ್ಲಿತೀರಿಸಿಕೋ. ನನ್ನಮೇಲಿನ ಹುಚ್ಚನ್ನು ಬಿಟ್ಟುಬಿಡು.

**ನರಸನಾಯಕ:**— ಸುದತೀ! ದಯದಾಕ್ಷಿಣ್ಯಗಳಿಲ್ಲದೇ ಈ ರೀತಿಮಾತನಾಡಬೇಡ. ಅಬಲೆಯನ್ನು ಕೊಂದರೆ ಪಾತಕವೆಂದು ಸುಮ್ಮನಿರಬೇಕಾಗಿದೆ. ಮೂರುಕೋಟೆಗಳಿಗೆ ಒಡೆಯನಾದ ನಾನು ಸಾಮದಿಂದ ಬುದ್ಧಿಹೇಳಿದರೆ, ಮೇರೆಮೀರಿ ಮಾತನಾಡುತ್ತಿರುವೆ. ಕಡೆಯಮಾತು ಹೇಳುತ್ತೇನೆ. ನಾಮಾವಶಿಷ್ಟನಾದ ರಾಮನಾಯಕನ ಮೇಲಿನ ವ್ಯಾಮೋಹವನ್ನು ಕಟ್ಟಿಟ್ಟು, ನನ್ನನ್ನು ವರಿಸಿ ಸಕಲ ×

**ಲಾವಣ್ಯವತಿ:**— ನಾನು ಸಹಾ ಕಡೆಯ ಮಾತನ್ನೇ ಹೇಳುವೆನು. ನಿನ್ನ ಪ್ರಗಲ್ಭಗಳನ್ನು ಸಾಕುಮಾಡಿ ಕೇಳು. ಪ್ರಾಣದಾಸೆ ನಿನಗಿದ್ದರೆ ನಿನ್ನ ದಾರಿಯನ್ನು ಹಿಡಿದು ನೀನು ಹೋಗು. ಇಲ್ಲವಾದರೆ×

"ಇಲ್ಲವಾದರೆ ನೀನೇನು ಮಾಡುವೆ?" ಎಂದು ನರಸನಾಯಕನು ಒಂದಡಿ ಮುಂದಿಟ್ಟನು. ಪ್ರಾಣದೊಲ್ಲಭನ ಕಳೇಬರವನ್ನು ತೊಡೆಯಮೇಲೆ ಹಾಕಿಕೊಂಡು, ಅದುವರೆಗೂ ಕುಳಿತಿದ್ದ ಲಾವಣ್ಯವತಿಯು ಮೇಲಕ್ಕೆ ಎದ್ದು ನಿಂತಳು. ನರಸನಾಯಕನು ಮತ್ತೊಂದು ಹೆಜ್ಜೆ ಮುಂದಕ್ಕೆ ಹಾಕಿದನು. ಪತಿಯಶವವನ್ನೆತ್ತಿ ಭುಜದ ಮೇಲೆ ಹಾಕಿಕೊಂಡು ಆ ಪುಣ್ಯಾತ್ಮಳು ಒಂದೆಜ್ಜೆ ಹಿಂದಕ್ಕೆ ಇಟ್ಟಳು. ನರಸನಾಯಕನು ಮುಂದರಿದನು. ಲಾವಣ್ಯವತಿಯು ಹಿಂಜರಿದಳು. ಎರಡೆಜ್ಜೆ ಅವನು ಮುಂದಕ್ಕೆ ಹಾಕಿದರೆ ಲಾವಣ್ಯವತಿಯು ಕೈಗೆ ಸಿಗುವಂತಿದ್ದಳು. ಆ ವೀರಾಂಗನೆಯು ಒಂದೆಜ್ಜೆ ಹಿಂದಕ್ಕೆ ಹಾಕಿದರೆ ನೂರಾರು ಮನುಷ್ಯರ ಆಳ ಕೆಳಕ್ಕೆ ಬೀಳುವಂತಿದ್ದಳು. ಆಕೆಗೆ ಧೈರ್ಯವು ಹೆಚ್ಚಾಯಿತು. ಇವನಿಗೆ ಉತ್ಸಾಹವು ಕಡಿಮೆಯಾಯಿತು. ಆಕೆಗೆ ಜೀವಿತದ ಆಸೆಯು ಕಡಿಮೆಯಾಗಲು, ಇವನಿಗೆ ಮೋಹವು ನಿರ್ಭರ

ವಾಯಿತು. ಆಕೆಯ ಮನಸ್ಸು ದೃಢವಾಯಿತು. ಇವನ ಮನೋಬಲವು ಸಡಿಲಿಹೋಯಿತು. ಅವನ ಕೈಗೆ ಎಂದಿಗೂ ಸಿಗುವವಳಲ್ಲವೆಂಬ ನಿದಾನದಿಂದ ಆಕೆಯಿದ್ದಳು. ಕೈತಪ್ಪಿ ಹೋದರೆ ಲಭಿಸಲಾರಳೆಂದು ಇವನು ಆತುರಪಡುತ್ತಿದ್ದನು.

ವಾಚಕರೇ! ಇದು ಕಡೆಯರಂಗ. ಭೀಕರದೃಶ್ಯಗಳನ್ನು ತೋರಿಸಿದೆನೆಂದು ದೂಷಿಸಬೇಡಿರಿ. ವಿಷಾದಪೂರಿತವೆಂದು ತಿರಸ್ಕರಿಸಬೇಡಿರಿ. ಪಾಳೆಯಗಾರರ ಕೋಟೆಗಳನ್ನು ಒಂದಾವರ್ತಿ ನೋಡಿದರೆ ನಿಮಗೇ ಗೊತ್ತಾಗುವುದು. ನಿಡುಗಲ್ಲು ಹಾಳುಕೋಟೆಯನ್ನು ನೋಡಿದವರು, ಅವರ ಚರಿತ್ರೆಯು ವಿಷಾದಾಂತವೆಂದಲ್ಲದೇ, ಬೇರೆ ನುಡಿಯಲು ಸಾಹಸ ಮಾಡಲಾರರು.

ಅಷ್ಟೇಕೆ? ಜೀವಿತವೇ ವಿಷಾದಮಯವಲ್ಲವೇ? ಭೀಕರದೃಶ್ಯಗಳನ್ನು ಜೀವಿತದಲ್ಲಿ ಕಣ್ಣಾರೆ ನೋಡದ ಪ್ರಾಣಿಯಾರು? ಎಷ್ಟು ಜನರ ಜೀವಿತ ನಾಟಕವು ವಿಷಾದಾಂತವಾಗುವುದಿಲ್ಲ. ವಾಚಕಬೃಂದಕ್ಕೆ ಅಂಥಾಜೀವಿತದ ನಿಜಸ್ಥಿತಿಯನ್ನು ಚಿತ್ರಿಸಿ ತಿಳುಹಿಸುವುದರಲ್ಲಿ ಲೇಖಕನು ಅಪರಾಧಿಯೆಂತಾಗಬಲ್ಲನು?

ನರಸನಾಯಕನಿಗೆ ಕಾಮದ ಮದವು ತಲೆಗೇರಿತು. ಆತುರವು ಹೆಚ್ಚಾಯಿತು. ಲಾವಣ್ಯವತಿಯನ್ನು ತಬ್ಬಿಕೊಂಡು, ಈಚೆಗೆ ಎಳೆದುಕೋಬೇಕೆಂದು ತನ್ನ ಎರಡು ತೋಳುಗಳನ್ನು ಚಾಚಿದನು. ಲಾವಣ್ಯವತಿಯು ಹುಸಿನಗೆನಕ್ಕಳು. ಅವನು ಒಂದೆಜ್ಜೆ ಮುಂದಕ್ಕಿಟ್ಟನು. ಆಕೆಯು ಹಿಂದಕ್ಕೆ ಸರಿದು ತುದಿಗಾಲಿನಲ್ಲಿ ನಿಂತಳು. ಹುಂಕರಿಸಿ ಅವನಾಕೆಯನ್ನು ತಬ್ಬಿಕೊಳ್ಳಲೋದನು. ಚಂಗನೆ ಆಕೆಯು ಹಿಂದಕ್ಕೆ ಹಾರಿದಳು.

ಪತಿವ್ರತಾಶಿರೋಮಣಿಯಾದ ಲಾವಣ್ಯವತಿಯು ಪ್ರಪಂಚದ ಮೇಲಿನ ಭ್ರಾಂತಿಗೀಡಾಗದೆ, ಮಾನರಕ್ಷಣೆಗೋಸುಗ, ದೈವತುಲ್ಯ

ನಾದ ನಾಥನ ಕಳೇಬರವನ್ನು ತನ್ನ ಬಾಹುದುರ್ಗಗಳನಡುವೆ ಸುರಕ್ಷಿತ ವಾಗಿ ಇಟ್ಟುಕೊಂಡು ಚಂಗನೆ ಹಿಂದಕ್ಕೆ ಹಾರಿದಳು.

ಎಲ್ಲಿಹೋದಳೋ? ಭೂಮಿಗಿಳಿದಳೋ? ಪತಿಯ ಪ್ರಾಣ ವನ್ನು ಕೊಡೆಂದು ಕಾಲನನ್ನು ಹಿಂಬಾಲಿಸಿದಳೋ ನಾನರಿಯೆ.

ಪಾಪಿಯಾದ ನರಸನಾಯಕನು ಆ ಸುಗುಣದ ರಾಶಿಯಮೇಲೆ ಬಿದ್ದನಷ್ಟೇ? ಆಕೆಯು ತಪ್ಪಿಹೋದಳು. ಬಯಲಿನ ಆಲಿಂಗನೆ ಯಾಯಿತು. ಜೋಲಿ ಮುಂದಕ್ಕೆ ಹೊಡೆಯಿತು. ಬೆಟ್ಟದಿಂದ ಕೆಳಕ್ಕೆ ಬಿದ್ದನು ಗುಂಡಿನಿಂದ ಗುಂಡಿಗೆ, ಬಂಡೆಯಿಂದ ಬಂಡೆಗೆ, ಗಿಡದಿಂದ ಗಿಡಕ್ಕೆ, ಪೊದೆಯಿಂದ ಪೊದೆಗೆ, ಬಿದ್ದುಬಿದ್ದು ಕೊನೆಗೆ ನೀರುನೆರಳಿಲ್ಲದ ಒಂದು ಕೊರಕಲಿನಲ್ಲಿ ಬಿದ್ದನು. ಮುರಿದ ಎಲು ಬಾಗಲಿ, ಮರಿಯದ ಎಲುಬಿರಲಿಲ್ಲ. ಕಣ್ಣುಗಳೆರಡರಲ್ಲೂ ಮುಳ್ಳು ಗಳು ನಾಟಿದ್ದವು. ತಲೆಹೊಡೆದು ಕೆಳಕ್ಕೆ ಸುರಿಯುತ್ತಿದ್ದ ತನ್ನರಕ್ತ ವನ್ನೇ ತಾನು ಕುಡಿಯಬೇಕಾಗಿತ್ತು. ಬೇರೆ ತಿಂಡಿಯಿಲ್ಲ; ತೀರ್ಥ ವಿಲ್ಲ. ಹೋಯೆಂದು ಗೋಳಿಡುತ್ತಿದ್ದನು

ಪ್ರಾಣವು ಹೋಗಿರಲಿಲ್ಲ. ಸಾಯುತ್ತಾ ಇದ್ದನು.

**ಸಂಪೂರ್ಣ.**